ಕರ್ನಾಟಕ ಸರ್ಕಾರ

# ಹಿಂಗಾರ

ಅರೆಭಾಷೆ ತ್ರೈಮಾಸಿಕ

ಸಂಪುಟ–1 ಸಂಚಿಕೆ–4 ದಿನಾಂಕ : 10.05.2017 ಕೊಡಗು ರೂ. 20/–

ಪೊನ್ನಿ- ಮಾಯಿ–ಸುಗ್ಗಿ ತಿಂಗ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

7-12-2016, ಪ್ರಾಧಿಕಾರ ಮತ್ತು ಅಕಾಡೆಮಿಗಳ ಸಂಯುಕ್ತಾಶ್ರಯದಲ್ಲಿ ಸಂಗಮ-ಸಂಭ್ರಮ 2016, ಮಡಿಕೇರಿ












ಯಕ್ಷಗಾನ ಮತ್ತು ಸಾಂಸ್ಕೃತಿಕ ಕಾರ್ಯಕ್ರಮ 11-12-2016 - ಗೌಜಿ - 2016, ಸುಳ್ಯ

# ಹಿಂಗಾರ

ಕರ್ನಾಟಕ
ಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ



ಪ್ರಧಾನ ಸಂಪಾದಕರ್

**ಕೊಲ್ಯದ ಗಿರೀಶ್**

ಸಂಪಾದಕರ್

**ಡಾ. ಪೂವಪ್ಪ ಕಣಿಯೂರು**

**ಮೋಹನ ಸೋನ**

ಪ್ರಕಾಶಕರು

**ಉಮರಬ್ಬ**

**HINGARA**
A Quarterly Magazine

Vol -1, Issue - 4

Date : 10-05-2017

Page : 84

Copies : 500

RNI No. : KARARB / 2016 / 69571

Price : Rs. 20/-

KODAGU

Cover Design : Dhivyashree K.R., Sri Krishna Printers

Photos : Poovappa Kaniyoor



Printed by UMARABBA on behalf of Registrar, Karnataka Arebhase Samskruthi Mathu Sahithya Academy, and Published by UMARABBA on behalf of Registrar, Karnataka Arebhase Samskruthi Mathu Sahithya Academy on behalf of KARNATAKA AREBHASE SAMSKRUTHI MATHU SAHITHYA ACADEMY (Name of the Owner) and Printed at SRI KRISHNA COMPUTERS & PRINTERS, Pooja Arcade, Jr. College Road, Madikeri, Kodagu District. And Published at Karnataka Arebhase Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : UMARABBA

www.arebhasheacademy.com. Email : arebaseacademy@gmail.com.

# ಅಧ್ಯಕ್ಷರ ನುಡಿ

ಅರೆಬಾಸೆ ತ್ರೈಮಾಸಿಕ ಹಿಂಗಾರದ 7ನೇ ಆವೃತ್ತಿ ನಿಮ್ಮ ಮುಂದೆ ಇಡ್ತಾ ಒಳೋ ಹಿಂಗಾರ ಪತ್ರಿಕೆ ಓದುಗರ ಸಂಖ್ಯೆ ಪ್ರತಿ ಆವೃತ್ತಿಲಿ ಹೆಚ್ಚಾಗ್ತ ಇರ್ದು ಅರೆಬಾಸೆ ಮೇಲೆ ಇರ್ವ ಪ್ರೀತಿನ ತೋರ್ಸಿದೆ.

ಜನವರಿ, ಫೆಬ್ರವರಿ, ಮಾರ್ಚ್ (ಪೊನ್ನಿ, ಮಾಯಿ, ಸುಗ್ಗಿ) ಈ ಮೂರು ತಿಂಗಲಿ ಅರೆಬಾಸೆ ಕಾರ್ಯಕ್ರಮ ಆದ್ ತುಂಬಾ ಕಮ್ಮಿ. ಕಾರಣ ಅಕಾಡೆಮಿನ 2016–17ನೆ ಸಾಲ್‌ನ ಅನುದಾನ ಖರ್ಚಾಗಿದ್ದ್, ಹೆಚ್ಚಿನ ವಿಶೇಷ ಅನುದಾನ ಮಂಜೂರಾಗಿಟ್ಟು, ಬಿಡ್‌ಗಡೆ ಆತ್ಲೆ.

ಅಕಾಡೆಮಿನ ಕಲಿಕಾ ಶಿಬಿರಲಿ ತಯಾರಾದ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಅವರ "ಕರ್ವಾಲೋ" ಕಾದಂಬರಿ ಅರೆಬಾಸೆ ನಾಟಕ ಜನವರಿ ತಿಂಗಲಿ ಸುಳ್ಯಲಿ ಪ್ರಸ್ತುತ ಪಡ್ಸಿದೊ, ಪ್ರದರ್ಶನ ಆದ ಈ ನಾಟಕ ಅಪಾರ ಜನಮನ್ನಣೆ ಗಳ್ಸಿತ್.

ಅಕಾಡೆಮಿಗಳ ಪ್ರಸ್ತುತ ಯೋಜನೆಗ ಮರುಕಳಿಕೆ ಆಗ್ತಾವುಟ್ಟುಂತೇಳ್ವ ವಿಚಾರಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಎಲ್ಲಾ ಅಕಾಡೆಮಿಗಳಿಗೂ ಕಚೇರಿ ಆದೇಶ ಕಳ್ಸಿಯೊಳೋ ಆದೇಶದ ಪ್ರಕಾರ ತರಭೇತಿ, ಕಮ್ಮಟ ಕಾರ್ಯಾಗಾರ ಶಿಬಿರಗಳ್ನ ನಡ್ಸೊಕು, ಧ್ವನಿ–ದೃಶ್ಯ–ಪಠ್ಯ ಅಕಾಡೆಮಿಯ ಯೋಜನೆ ಭಾಗವಾಗಿ ರೋಕು, ಅಧ್ಯಯನ, ಸಂಶೋಧನೆಗೆ ಅಧ್ಯತೆ ಕೊಡೊಕು ಹಂಗೆ ಪ್ರಶಸ್ತಿ ಪ್ರಧಾನ ಮತ್ತೆ ವಾರ್ಷಿಕೋತ್ಸವಲಿ ಮಾತ್ರ ಸಾಂಸ್ಕೃತಿಕ ಕಾರ್ಯಕ್ರಮ ಸಂಘಟಿಸೊಕುಂತೇಳ್ವ ಸಂದೇಶನ ಎಲ್ಲಾ ಅಕಾಡೆಮಿಗಳಿಗೂ ಕಳ್ಸಿಯೊಳೊ, ಅಕಾಡೆಮಿನ ಭಾಷೆ, ಸಂಸ್ಕೃತಿ, ಸಾಹಿತ್ಯ ಬೆಳ್ಸಿಕೆ ಈ ಆದೇಶ ಬಹಳ ಸಹಕಾರಿ ಆದೇ, ಅಕಾಡೆಮಿನ 2017–18ನೇ ಸಾಲ್‌ನ ಕ್ರಿಯಾಯೋಜನೆನ ಆದೇಶದ ಪ್ರಕಾರ

ಸಿದ್ದಪಡ್ಸಿ ಅನುದಾನ ಬಿಡುಗಡೆ ಆದಂಗೆ ಕಾರ್ಯಕ್ರಮ ಶುರು ಮಾಡಿವೆ.

ಅಕಾಡೆಮಿ ಅನುಭವಿ ಸದಸ್ಯರಾದ ಸಂಸ್ಕೃತಿಯ ಜ್ಞಾನಭಂಡಾರವೇ ಆಗಿದ್ದ ಸಮಾಜ ಸೇವೆಲಿ ಸಹಾಯ ಹಸ್ತ ಚಾಚುವಲ್ಲಿ ಮುಂಚೂಣಿಲಿದ್ದ ಧೀಮಂತ ವ್ಯಕ್ತಿತ್ವದ ಮದುವೆಗದ್ದೆ ಬೋಜಪ್ಪ ಗೌಡನವು 2017 ಏಪ್ರಿಲ್ 04 ರಂದ್ ನಿಧನರಾದೊ, ಇವರ ಆತ್ಮಕ್ಕೆ ಆ ಭಗವಂತ ಚಿರಶಾಂತಿ ಕರುಣಿಸಲಿಂತ ನಮ್ಮ ಪ್ರಾರ್ಥನೆ

ಅಕಾಡೆಮಿ ಶ್ರೇಯಸ್ಸಿಗೆ ದುಡಿತಾ ಇರ್ವ ಎಲ್ಲಾ ಸದಸ್ಯರಿಗೂ ಪ್ರಸ್ತುತ ಪ್ರಕಟಣೆ ಸಮಿತಿ ಹಂಗೆ ಹಿಂಗಾರ ಪ್ರಕಟಣೆ ಸಮಿತಿಯ ಸದಸ್ಯರಿಗೂ ಎಲ್ಲಾ ಓದುಗರಿಗೂ ನನ್ನ ವೈಯುಕ್ತಿಕ ಕೃತಜ್ಞತೆ ತಿಳ್ಸ್‌ತಾ ಒಳೆ.

**10.5.2017** **– ಕೊಲ್ಯದ ಗಿರೀಶ್**

## ಸಂಪಾದಕೀಯ...

ಇದ್ ಅಕಾಡೆಮಿನ ಆರ್.ಎನ್.ಐ ನಂಬರ್ ಸಿಕ್ಕದ ನಂತರದ ಮೂರ್ನೆ; ಅಕಾಡೆಮಿನ ಒಟ್ಟಾರೆ ಎಳ್ನೆ ಸಂಚಿಕೆ ಆವುಟ್. ಇದರ್ಲಿ ಜನವರ್‌ಂದ ಮಾರ್ಚ್‌ನ ತನಕದ ಸಂಗತಿಗಳ್ನ ಸಂಕಲಿಸ್ಯೊಳೊ.

ನಾವ್ಗೆಲ್ಲಾ ಗೊತ್ತಿರುವಂಗೆ ಜನವರ್‌ಂದ ಮೇ ತಿಂಗ ಮುಟ್ಟನ ಕಾಲಂತೇಳ್ರೆ ಅದ್ ಎಲ್ಲಾ ದೃಷ್ಟಿಲು ಎಲ್ಲವ್ಕೂ ಜರೂರಿನ ಕಾಲ; ಬಿರು ಬಿಸ್‌ಲ್ನ ಸಂದರ್ಭ ಆಗಿದ್ದದೆ. ಹಾಗಂತೇಳಿ ನಡೆವ ಕಾರ್ಯಗ ನಡ್ಯಯದೆ ಇರ್ದುಲೆ. ಅರೆಭಾಷಿಕ-ತುಳುವವಕ್ಕೆ ಪೊನ್ನಿ ತಿಂಗಂದ ಸುಗ್ಗಿ ತಿಂಗ ಮುಟ್ಟ ಪುರುಸೊತ್ತೇ ಇರ್ದುಲೆ. ಬರ ಇರ್ಲಿ ಕ್ಷಾಮ ಇರ್ಲಿ ಅವು ತುರ್ತುಲಿ ಇದ್ದವೆ. ಸುಗ್ಗಿ ಬಾತ್‌ಂತೇಳ್ರೆ ಮೈಯುಬ್ಬಿ ಹಬ್ಬಗ, ಕೋಲ - ನೇಮಗ, ಜಾತ್ರೆಗ ಸಡಗರಲಿ ಮೈಮರತ್ ಬುಡುವ ಕಾಲ. ಅರೆಭಾಷಿಕ ಈಗ ಅವರ ಪೂರ್ವಿಕರ್‌ಂದ ನಡ್ಕೊಂಡ್ ಬಂದ ದೆವ್ವಗಳಿಗೆ ಕೋಲ-ನೇಮ ಕೊಟ್ಟೊಳೊ, ಕಳಿಯಾಟ ನಡೆಸಿಯೊಳೊ, ಸಂಕ್ರಮಣನ ಸಂಭ್ರಮಿಸಿಯೊಳೊ. ಯುಗಾದಿ ಆಚರಿಸ್ಯೊಳೊ. 'ಬಿಸುಕಣಿ' ಇಟ್ಟ್ ಮನೆನ ತೊಂಬರ- ಚಾವಡಿಲಿ ಪ್ರಾರ್ಥಿಸ್ಯೊಳೊ. ಒಟ್ಟಾರೆ ಸುಗ್ಗಿಂತೇಳ್ರೆ ನಾವ್ಗೆ ಮನೆ ಮನಗಳ್ಲಿ ಸಂಭ್ರಮ. ಕಾಫಿ ಕ್ಯೊಯ್ದ್, ಅಡಿಕೆ, ಮೆಣಸ್ ಹಾಂಗೆನೆ ರಬ್ಬರ್ ತಟ್ಟೆಗ ಮನೆ ತುಂಬಿರುವ ಕಾಲಲಿ ಇದೆಲ್ಲಾ ನಡೆಯೊಕು. ಐಶ್ವರ್ಯ ಇರ್‌ಕಾಕನ ಸಂಭ್ರಮಿಸೋದು ತಪ್ಪಲ್ಲ; ಸಹಜ.

ನಾವು ಆಲೋಚಿಸಿದಂಗೆ ಈ ಸಂಚಿಕೆಲಿ ಭಿನ್ನ ಆಲೋಚನೆಗ ಇರುಂವ ಬರಹಗಳೊಳೊ. ಸಾಂಸ್ಕೃತಿಕ - ಚಾರಿತ್ರಿಕ, ಚಿಂತನೆನ ಬರಹಗನ ಸಂಕಲಿಸ್ಯೊಳೊ. ಕತೆ, ಕವನಗಳೊಟ್ಟಿಗೆ, ವೈಚಾರಿಕ ಲೇಖನಗ ಮುಂದೇನು ನೀವ್‌ಗ ಬರ್ದು ಕಳ್ಸಿರೆ ಈ ಸಂಚಿಕೆ ಮೌಲಿಕ ಆಗಿ ಮುಂದುವರ್ಯಕೆ ಸಾಧ್ಯ ಉಟ್ಟು. ಈ ಸಂಚಿಕೆಗೆ ಮಸ್ತ್ ಜನ ಹಿರಿ ಕಿರಿ ಬರಹಗಾರ್ರ್ ಕವನ, ಕಥೆ, ಜನಪದ, ಪದ್ಧತಿ, ಸಂಸ್ಕೃತಿ, ಒಗಟ್ ಸಹಿತ ಬರಹಗನ ಕೊಟ್ಟು ಸಹಕರಿಸ್ಯೊಳೊ. ಈ ಸಂಚಿಕೆಲಿ ಅರೆಭಾಷೆನ ಹಿರಿಯ ಬರಹಗಾರ ಆಗಿರುಂವ ಅಚ್ಚ ಕನ್ನಡಲಿ ಕಾವ್ಯ, ಅಚ್ಚಗನ್ನಡ ಶಬ್ದಕೋಶ ಬರ್ದ್ 'ಅಭಿನವ ಆಂಡಯ್ಯ' ಬಿರುದಾಂಕಿತ ದಿ। ಕೊಳಂಬೆ ಪುಟ್ಟಣ್ಣ ಗೌಡ ಇವರ ಕುರ್ತ್ ಎಂ.ಜಿ. ಕಾವೇರಮ್ಮನವು ಬರ್ದ ಪರಿಚಯ ಲೇಖನನ ಸೇರ್ಸಿಯೊಳೊ.

ಜನವರಿಂದ ಮಾರ್ಚ್ ತಿಂಗಳ (ಪೊನ್ನಿ-ಮಾಯಿ-ಸುಗ್ಗಿ ತಿಂಗ) ಅವಧಿಲಿ ಅಕಾಡೆಮಿ ಪ್ರಯೋಜಿಸಿದ ಹಾಂಗೇನೆ ಅಕಾಡೆಮಿ ನಡ್ಸಿದ ಕಾರ್ಯಕ್ರಮಗ ಕಡಿಮೆ. ಮಾಡ್ದರ ಇಲ್ಲಿ ದಾಖಲಿಸ್ಯೊಳೊ. ವಿಶೇಷ ಆಗಿ ಈ ಅವಧಿಲಿ ನಾಟಕ ಕಲಿಕಾ

ಶಿಬಿರನ ಸುಳ್ಯಲಿ ನಡೆಸ್ಯೊಳೊ. ಈ ಶಿಬಿರಲಿ ಕನ್ನಡದ ಖ್ಯಾತ ಬರಹಗಾರ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ 'ಕರ್ವಾಲೋ' ಕಾದಂಬರಿನ ಅರೆಭಾಷೆಲಿ ನಾಟಕ ಆಗಿ ಸಿದ್ಧ ಪಡಿಸ್ಯೊಳೊ. ಡಾ. ಪೂವಪ್ಪ ಕಣಿಯೂರು ಅವು ಸಿದ್ಧ ಪಡ್ಸ್‌ದ ಸ್ಕ್ರಿಪ್ಟ್‌ನ ಮೋಹನ್ ಸೋನ ಅವು ನಿರ್ದೇಶಿಸ್ಯೊಳೊ. ನಾಟಕ ಪ್ರದರ್ಶನನ ಸುಳ್ಯದ ಯುವಜನ ಸಂಯುಕ್ತ ಮಂಡಲಿ. ಇದರ ಜಾನಕಿ ವೆಂಕಟ್ರಮಣ ಗೌಡ ವೇದಿಕೆಲಿ ಜನವರಿ 26, 2017ರಂದ್ ಪ್ರದರ್ಶಿಸಿ ಯಶಸ್ವಿಯಾಗೊಳೊ.

ಈ ಸಂಚಿಕೆನ ಹೊರತಾಕೆ ಅಕಾಡೆಮಿ ಅಧ್ಯಕ್ಷರ್, ರಿಜಿಸ್ಟ್ರಾರ್, ಸರ್ವ ಸದಸ್ಯರ್ ಸಹಕರಿಸ್ಯೊಳೊ. ಬರಹಗಾರರ್ ಮುತುವರ್ಜಿಲಿ ಮತ್ತು ಭಾಷೆನ ಪ್ರೀತಿಲಿ ತಮ್ಮ ಬರಹಗನ ನೀಡಿ ಸಂಚಿಕೆನ ಮೌಲ್ಯನ ಹೆಚ್ಚಿಸ್ಯೊಳೊ. ಅಕ್ಷರ ಜೋಡಣೆಲಿ ಸುಳ್ಯದ ಚೆನ್ನಕೇಶವ ಜೆರಾಕ್ಸ್‌ನವು, ಪ್ರತಿ ತಿದ್ದುವಲ್ಲಿ ಶ್ರೀಮತಿ ಸರೋಜ ಪಿ. ಕಣಿಯೂರು, ಎಂ.ಜಿ ಕಾವೇರಮ್ಮನವು ಕೈ ಜೋಡಿಸ್ಯೊಳೊ. ಪ್ರಿಂಟ್ ಹಾಕ್ಸುವಲ್ಲಿ ಮತ್ತು ಸಂಚಿಕೆನ ಮುಖಪುಟ ವಿನ್ಯಾಸ ಮಾಡ್ದ ಮಡಿಕೇರಿನ ಶ್ರೀಕೃಷ್ಣ ಕಂಪ್ಯೂಟರ್ಸ್ ಮತ್ತು ಪ್ರಿಂಟರ್ಸ್‌ನವು ಸಹಕರಿಸ್ಯೊಳೊ. ಸಹಕರ್ಸ್‌ದ ಎಲ್ಲವ್ಕೆನೂ ತುಂಬು ಕೃತಜ್ಞತೆನ ನಾವು ತಿಳ್ಸುವೆ.

ತಾ. 10.05.2017

**ಡಾ. ಪೂವಪ್ಪ ಕಣಿಯೂರು**



# ಹಿಂಗಾರ ಒಡ್ಸ್ಕನ

## ನಗೆ ಬರಹ



## ಕವನಗ

ವ್ಯಕ್ತಿ ಪರಿಚಯ



# ಅಭಿನವ ಆಂಡಯ್ಯ ದಿ| ಕೊಳಂಬೆ ಪುಟ್ಟಣ್ಣ ಗೌಡ್ರು

ಎಂ.ಜಿ ಕಾವೇರಮ್ಮ

'ಕಾಲೂರು ಚೆಲುವೆ' ಎಂಬ ಅಚ್ಚ ಗನ್ನಡದ ಖಂಡ ಕಾವ್ಯನ ರಚಿಸಿ ಜನರ್‌ಂದ 'ಅಭಿನವ ಆಂಡಯ್ಯ' ಎಂಬ ಬಿರ್ದ್‌ನ ಪಡ್ದೊವು ದಿ|ಕೊಳಂಬೆ ಪುಟ್ಟಣ್ಣ ಗೌಡ್ರು ಕೊಕ್ಕರೆ ಗರಿ ಹಾಂಗೆ ಇದ್ದ ಅಚ್ಚ ಬಿಳಿ ಬಣ್ಣದ ಎಂಟ್ ಮೊಳದ ವೇಸ್ಟಿನ ಕಚ್ಚೆ ಹಾಕಿ ಉಟ್ಟ್, ಇಸ್ತ್ರಿ ಹಾಕಿದ ತುಂಬು ತೋಳ್‌ನ ಬಿಳಿ ಪಂಜಾಬ್ ಶರ್ಟ್ ಹಾಕಿ, ಅದರ ಮೇಲೆ ಇಸ್ತ್ರಿ ಹಾಕಿದ ಬಿಳಿ ಶಾಲ್‌ನ ಹಾಕಿದ, ನೀಳ ಕಾಯದ, ಗೌರವರ್ಣದ, ಯಾಗೋಳು ಕೈಲೊಂದು ಪುಸ್ತಕನ ಹಿಡ್ಕಂಡ್ ನೆಗಡಿಕಂಡ್ ಇರ್ಪ ದಿ|ಕೊಳಂಬೆಯೊವು ಧೀರ ನಡ್ಗೆಲಿ ನಡ್ಕಂಡ್ ಬಾಕನ ಎಲ್ಲೊವು ಅವ್ಕೆ ಕೈ ಮುಗ್ಯತಿದ್ದೊ. ಅವರ ಶಿಷ್ಯರಿಗೆ ಅವು ಅಚ್ಚುಮೆಚ್ಚ್‌ನ ಗುರುಗಳಾಗಿದ್ದೊ. ಅವು ಪಾಟ ಮಾಡಿಕಾಕನ ಅವರ ಪಾಟ ಕೇಳಿಕಂಡ್ ಮಕ್ಕ ಹಾವಾಡಿಗನ ಪುಂಗಿ ನಾದಕ್ಕೆ ತಲೆ ತೂಗುವ ಸರ್ಪದಾಂಗೆ, ಮಂತ್ರ ಮುಗ್ಧರಾಗಿ ತಲೆದೂಗ್‌ತಿದ್ದೊ. ರನ್ನನ ಗಧಾಯುದ್ಧ, ಜನನ್ನ ಯಶೋದರ ಚರಿತ್ರೆ, ರಾಮಾಶ್ವಮೇದದ ಮುದ್ದಣ್ಣ ,ಮನೋರಮೆನ ಸರಸ ಸಲ್ಲಾಪ, ಕುಮಾರ ವ್ಯಾಸನ ಭಾಮಿನಿ ಷಟ್ಪದಿ, ಹರಿಹರನ ರಗಳೆ- ಇದೆಲ್ಲಾ ಅವರ ಬಾಯಿಂದಲೇ ಕೇಳೊಕು. ಗಧಾಯುದ್ಧದ ನೋರೊಳಗಿರ್ದು ಬೆದರಿದನುರಗಸತಾಕಂ' ಎಂಬ ಒಂದು ವಾಕ್ಯಕ್ಕೆ ರಸವತ್ತಾಗಿ ಅವು ಒಂದು ಗಂಟೆ ಮುಟ್ಟ ಬಣ್ಣಿಸಿ ಕೌರವನ ಕೆಚ್ಚೆದೆನ, ಭೀಮ ಕೌರವಂಗೆ ಹಂಗುಸುದರ ಬಾಳ ಪೊರ್ಲುಲಿ ಬಣ್ಣಿಸಿಕನ ಕ್ಲಾಸ್‌ಗೆ ಕ್ಲಾಸೇ ಕಣ್ಣ್ ಬುಟ್ಟ್ ಕೆಬಿ ಕೊಟ್ಟ್‌ಕಂಡ್ ಅವರನ್ನೇ ನೋಡಿಕಂಡ್ ಅವರ ಶಿಷ್ಯರ್ ಕುದ್ರ್‌ತಿದ್ದೊ. ಅವರ ಶಿಷ್ಯರ್ಲಿ. ತುಂಬಾ ಜನ ಈಗ ಕವಿಗಳಾಗಿ ಒಳೊ. ವ್ಯಾಕರಣಲಿ ಸಂದಿ, ಸಮಾಸ, ಅಲಂಕಾರಗಳ, ಗಣ-ಮಾತ್ರೆಗಳ, ಮಕ್ಕಳ ತಲೆಗೆ ಹೊಕ್ಕುವ ಹಾಗೆ ವಿವರಿಸಿ, ಅವು ಪಾಟ ಮಾಡ್ತಿದ್ದೊ. ಎಂತಾ ಕಷ್ಟದ ಶಬ್ದ ಇದ್ದರೂ ಅವು ಅದ್ಕೆ ತಡವರ್ಸದೆ ಉದಾರ್ಣೆ ಕೊಟ್ಟ್ ವಿವರ್ಸ್‌ತಿದ್ದೊ. ಅವರ ತಲೆ ಅಗಾಧ ಜ್ಞಾನ ಭಂಢಾರ ಆಗಿತ್ತ್, ಕನ್ನಡಲಿ ಸಾಹಿತ್ಯ ಶೈಲಿ, ಪ್ರಾಸಬದ್ಧ ಪದರಚನೆಗಳ ಅವು ಲಾಯ್ಕಾಗಿ ಮಕ್ಕಳಿಗೆ ಹೇಳಿಕೊಡ್ತಿದ್ದೊ.

ದಿ|ಕೊಳಂಬೆನೊವು ಅಮರಪಡ್ನೂರು ಗ್ರಾಮದ ಚೊಕ್ಕಾಡಿನ

ಕೊಳಂಬೆ ಎಂಬಲ್ಲಿ ತಾ;25.02.1902 ರ್ಲಿ ಹುಟ್ಟಿದೊ. ಅವರ ಅಪ್ಪ ಸುಬ್ರಾಯ ಗೌಡ್ರು ಕೃಷಿಕರ್. ಅವ್ವ ಸುಬ್ಬಮ್ಮ ಮನೆ ವಾರ್ತೆ ಮಾಡುವ ಹೆಣ್ಣ್. ಸುಬ್ರಾಯ ಗೌಡ ದಂಪತಿಗಳಿಗೆ ನಾಕ್ ಮಕ್ಕ. ಕೊಳಂಬೆಯೊವ್ಕೆ ಇಬ್ಬೊರು ಅಣ್ಣಂದರ್, ಒಬ್ಬ ಅಕ್ಕ. ಇವು ಎಲ್ಲರ್‌ಂದಳೂ ಸಣ್ಣೊವು. ಇವು ಅಮರಪಡ್ನೂರ ಸಾಲೆಲಿ ಪ್ರಾಥಮಿಕ ಶಿಕ್ಷಣ ನಾಕ್ ನೇ ಕ್ಲಾಸ್ ಮುಟ್ಟ ಓದಿದೊ. ಅದರ್‌ಂದ ಮೇಲೆ ಖಾಸಗಿಯಾಗಿ ಎಂಟನೇ ತರಗತಿ ಮುಟ್ಟ ಓದಿ ಪರೀಕ್ಷೆಗೆ ಬರ್‍ದೊ, ಅಕೆರಿಗೆ ಅವು ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಕುದ್ದ್ ಪಾಸಾದೊ.

ಸುರುಗೆ ಅವು ಕಲ್ತ ಅಮರಪಡ್ನೂರು ಸಾಲೆಲಿ ಕಲ್ಸಾಯ್ತ(ಗುರು)ರಾಗಿ ಕೆಲ್ಸಕ್ಕೆ ಸೇರದೊ. ಅಕೇರಿಗೆ ಅದೇ ಸಾಲೆಲಿ ಮುಖ್ಯ ಶಿಕ್ಷಕ ಆದೊ. ಅದರ್‌ಂದ ಮೇಲೆ ಅವು ಪಂಜ, ಕೋಟೆ ಮುಂಡುಗಾರು ಬೊಬ್ಬೆಕೇರಿ, ಮಾಣಿ, ಪುತ್ತೂರು, ಉಪ್ಪಿನಂಗಡಿ ಪ್ರಾಥಮಿಕ ಶಾಲೆಗಳ್‌ಲಿ ಶಿಕ್ಷಕರಾಗಿ ದುಡ್ದೊ. ಎರ್‍ಡ್ ವೊರ್ಸ ಸುಳ್ಯ ಹಯರ್ ಎಲಿಮೆಂಟರಿ ಸಾಲೆಲಿ ಶಿಕ್ಷಕರಾಗಿ ದುಡ್ದೊಳೊ. ಅದರ್‌ಂದ ಮೇಲೆ ಅವು ಕನ್ನಡದ ವಿದ್ವಾನ್ ಪರೀಕ್ಷೆಗೆ ಕುದ್ದ್‌ದ್ ಪಾಸಾಗಿ ವಿದ್ವಾನ್ ಪದವಿ ಪಡ್ದೊ. ಸುಳ್ಯ ಬೋರ್ಡ್ ಹೈಸ್ಕೂಲ್‌ಲಿ ಎಂಟ್ ವೊರ್ಸಗಳ ಕಾಲ ಅವು ಶಿಕ್ಷಕರಾಗಿ ದುಡ್ದೊಳೊ. ಅದೇ ಸಾಲೆಲಿ 1958 ರ್ಲಿ ಉದ್ಯೋಗಂದ ನಿವೃತ್ತರಾದೊ.

ದಿ। ಕೊಳಂಬೆಯವರ ವೃತ್ತಿ ಜೀವನ ಹೇಂಗಿದ್ದರೂ, ಅವರ ಸಾಧನೆಗ ಅಪಾರ. ಅವು ಸಣ್ಣದಿರಿಕಾಕನನೆ ಆದಿಕವಿ ಪಂಪನ ಕೃತಿಗಳ ಆದಿ ಪುರಾಣ, ವಿಕ್ರಮಾರ್ಜುನ ವಿಜಯ, ವಡ್ಡಾರಾಧನೆ, ಜೈಮನಿ ಭಾರತ, ಹರಿಶ್ಚಂದ್ರ ಕಾವ್ಯ, ಕುಮಾರ ವ್ಯಾಸ ಭಾರತ,– ಇದರೆಲ್ಲಾ ವ್ಯಾಸಂಗ ಮಾಡಿ ಅರ್ಥ್ ಕುಡ್ದೊವು. ಮುದ್ದಣ್ಣನ ರಾಮಾಶ್ವಮೇದ ಇವರ ಅಚ್ಚು ಮೆಚ್ಚಿನ ಕೃತಿ ಆಗಿತ್ತು. ಕೇಶಿರಾಜನ ಶಬ್ದ ಮಣಿದರ್ಪಣನ ಇವು ಆಳವಾಗಿ ಅಧ್ಯಯನ ಮಾಡ್ದೊವು. ಯಕ್ಷಗಾನ ಜ್ಯೋತಿಷ್ಯ, ಹಸ್ತ ಸಾಮುದ್ರಿಕ ಶಾಸ್ತ್ರ, ಮೃದಂಗ ವಾದನ, ಹರಿಕತೆ, ಪುರಾಣ ವಾಚನ, ಚಿತ್ರಕಲೆ ಇದರ್‍ಲಿ ಎಲ್ಲಾ ಅವ್ಕೆ ತುಂಬಾ ಅನುಭವ ಇತ್ತ್.

'ಬೆರಳ್‌ಗಳ್‌ಂದ ಅದೃಷ್ಟ' ಇದ್ ಅವು ಬರ್‍ದ್ ಪ್ರಕಟಿಸಿದ ಕೃತಿ. 'ಹಸ್ತ ಸಾಮುದ್ರಿಕ' ಎಂಬ ಪುಸ್ತಕನ ಅವು ಬರ್‍ದಿದ್ದೊ. ಆದರೆ ಅದ್ ಪ್ರಕಟ ಆತ್ಲೆ. ಇನ್ನಾದರೂ ಅವರ ಮಕ್ಕ ಅದರ ಹುಡ್ಕಿ ಪ್ರಕಟಣೆ ಮಾಡ್ರೆ ಕನ್ನಡ ಸಾಹಿತ್ಯ ಲೋಕಕೆ ಒಂದು ಅಮೂಲ್ಯ ಕೊಡ್ಗೆ ಆದು. ಮುಳಿಯ ತಿಮ್ಮಪ್ಪ ಯ್ಯ ಕಡಂಗೊಡ್ಲು ಶಂಕರಭಟ್ ಸೇಡಿಯಾಪು ಕೃಷ್ಣ ಭಟ್– ಇಂತಾ ಹಿರಿಯ ಕವಿಗಳ ಸಾಲ್‌ಗೆ ಸೇರ್‍ದೊವು ದಿ।ವಿದ್ವಾನ್ ಕೊಳಂಬೆ ಪುಟ್ಟಣ್ಣ ಗೌಡ್ರು. ಇವು ಸವಿಗನ್ನಡದ ಗಾರುಡಿಗ, ಸಮರ್ಥ ಕವಿಗ.

ಯಕ್ಷಗಾನ, ತಾಳಮದ್ದಳೆಲಿನೂ ಇವು ಎತ್ತಿದ ಕೈ. ಕನ್ನಡ ಸಾಹಿತ್ಯಲಿ ಹೇಂಗೆನೋ ಹಾಂಗೆನೇ ಮಾತುಗಾರಿಕೆಲಿನೂ ಖಡಾ ಖಂಡಿತವಾದ ಅರ್ಥಗಾರಿಕೆ ಹೇಳ್ದೊವು. ತಾಳ ಮದ್ದಳೆಲಿ ಇವರ ಕೃಷ್ಣ ಲೀಲೆನ ಅಕ್ರೂರ, ಶ್ರೀರಾಮ ಪಟ್ಟಾಭಿಷೇಕದ ರಾಮ– ಜನಮೆಚ್ಚಿದ ಅಚ್ಚುಮೆಚ್ಚಿನ ಪಾತ್ರಗ. ನಾರಾಯಣ ಕಿಲ್ಲೆ, ಕವಿಭೂಷಣ ವೆಂಕಪ್ಪ ಶೆಟ್ಟಿ, ಶೇಣಿ ಗೋಪಾಲಕೃಷ್ಣ ಭಟ್, ದೇರಾಜೆ ಸೀತಾರಾಮಯ್ಯ, ಕೀರಿಕ್ಕಾಡು ವಿಷ್ಣುಭಟ್ ಇಂತಾ ಅತಿರಥ ಮಹಾರಥರೊಟ್ಟಿಗೆ ಅರ್ಥಹೇಳಿ ಮಿಕ್ಕಿದೊವು. ಚೊಕ್ಕಾಡಿಲಿ ಶಾರದಾ ಕೃಪಾಪೋಷಿತ ಯಕ್ಕಗಾನ ಮಂಡಳಿ ಸಂಸ್ಥೆನ ಇವು ಮತ್ತೆ ಇವರ ಸ್ನೇಹಿತರ್ ಸೇರಿ ಸ್ಥಾಪಿಸಿದೊ. ಇವರ ಅಪ್ಪ ಸುಬ್ರಾಯ ಗೌಡ್ರು ಯಕ್ಷಗಾನಲಿ ಹಾಸ್ಯಗಾರರಾಗಿ ಪಾತ್ರ ಮಾಡ್ತಿದ್ದೊ. ಇವರ ಎರ್‍ಡನೇ ಅಣ್ಣ ಕುಕ್ಕಪ್ಪ ಗೌಡ್ರು ಭಾಗವತರಾಗಿದ್ದೊ. ಕೆಲವು ಸ್ನೇಹಿತರೊಡನೆ ಸೇರಿಕಂಡ್ 'ಚೊಕ್ಕಾಡಿ ಮೇಳ' ಎಂಬ ಹೆಸ್ರ್‌ಲಿ ಮಂಗಲ್ಪಾಡಿ, ಬೆಳ್ಳಾರೆ, ಕಲ್ಮಡ್ಕ, ಪಂಜ ಮುಂತಾದ

ಜಾಗೆಗಳ್‌ಲಿ ಯಕ್ಷಗಾನ ಪ್ರದರ್ಶನ ಮಾಡ್ತಿದ್ದೊ. ಆ ಮೇಳಕೆ 'ಕುಕ್ಕಪ್ಪನ ಮೇಳ'– ಎಂತ ಅಡ್ಡ ಹೆಸ್ರ್‌ನೂ ಇತ್ತ್ ಗಡ.
ಕೊಳಂಬೆಯವರ ಆದಿ ಮನೆಲಿ ಈಗಲೂ ಹಳೆ ಕಾಲದ ಮದ್ದಳೆ ಚೆಂಡೆಗ, ಹಾರ್ಮೋನಿಯಂ ಒಳೊ. ಯಕ್ಷಗಾನಲಿ ಅಂಧಕಾಸುರ ವಧೆ, ಶ್ರೀ ಭಾರತೀ ವಿಜಯ, ನೆಲ್ಲೂರ ಗೆಲ್ಲ– ಈ ಕೃತಿಗಳ ಕೊಳಂಬೆಯೊವು ಬರ್ದೊಳೊ.
ಕೊಳಂಬೆವು ಮದ್ಯಪಾನ ವಿರೋಧಿ ಆಗಿದ್ದೊ ಸಹಕಾರ ಪಿತಾಮಹರೆಂದ್ ಹೆಸ್ರ್ ಪಡ್ದ ದಿ|ಮೊಳಹಳ್ಳಿ ಶಿವರಾಯ್ ಮದ್ಯಪಾನ ವಿರೋಧಕ್ಕೆ ಸಂಬಂಧಿಸಿದಾಂಗೆ ಸರಕಾರಂದ ಸ್ಥಫಿಸಿದ 'ಸೆಂಟ್ರಲ್ ಪ್ರೊಪಗಾಂಡ ಸಮಿತಿಯ'ಯ ಸದಸ್ಯರಾಗಿದ್ದೊ. ಅವರೊಟ್ಟಿಗೆ ಸೇರಿಕಂಡ್ ಕೊಳಂಬೆಯೊವುನೂ ಮದ್ಯಪಾನ ವಿರೋದ ಸಭೆ ಸಮಾರಂಭಲಿ ಸೇರಿಕಂಡ್ ಹಳ್ಳಿ ಹಳ್ಳಿಗೆ ಹೋಗಿ ಭಾಷಣ ಮಾಡ್ತಿದ್ದೊ. ಮಧ್ಯಪಾನ ವಿರೋಧ ಸಾಹಿತ್ಯ ಕೃತಿಗಳ, ಪದ್ಯಗಳ, ನಾಟಕಗಳ ಬರ್ದ್ ಆಡ್ಸ್‌ತಿದ್ದೊ.
ದಿ| ಕೊಳಂವೆಯೊವು ಪೂರಾ ಸಸ್ಯಾಹಾರಿ ಆಗಿದ್ದೊ ಮಧು–ಮಾಸ ಮುಟ್ಟ್‌ತಿತ್ಲೆ. ಉಪ್ಪು,ಖಾರ ಬುಟ್ಟ್, ಚಪ್ಪೆ ಆಹಾರ ತಿಂತಿದ್ದೊ. ಹಾಲ್,ಹಣ್ಣ್ ಅವು ತುಂಬಾ ಪ್ರಿತಿಸ್‌ತಿದ್ದೊ. ಅವರ ಮಿತ ಆಹಾರ, ಸರಳ ಜೀವನನ ನೋಡಿಕಾಕನ ಮಹಾತ್ಮ ಗಾಂದಿಯವರ ಪ್ರಭಾವ ಅವರ ಮೇಲೆ ಸಾಕಷ್ಟ್ ಬೀರಿತ್ತ್‌ಂತ ಕಂಡದೆ.
ಕಾಲೂರ ಚೆಲುವೆ ಬರ್ದ ಮೇಲೆ ದಿ|ಕೊಳಂಬೆಯೊವು ಸಾವಿರ ಮುಕ್ತಕಗಳ 'ನುಡಿವಣಿಗಳು' ಎಂಬ ಪುಸ್ತಕನ ಅಚ್ಚ ಕನ್ನಡಲಿ ಬರದೊ. ಇದಕ್ಕೆ ರಾಷ್ಟ್ರಕವಿ ಕುವೆಂಪುನೊವು ಮುನ್ನುಡಿ ಬರ್ದೊಳೊ. ಅವರ ದೀರ್ಘ ಕಾಲದ ತಪಸ್ಸ್‌ನ  ಫಲಂದ ಅಚ್ಚಕನ್ನಡ ನುಡಿಕೋಶನ ತಯಾರಿ ಮಾಡಿಸಿ ಇಟ್ಟಿದ್ದೊ. ಆದರೆ ಅವ್ಕೆ ಜೀವಲಿರಿಕಾಕನ ಅದರ ಪ್ರಕಟಣೆ ಮಾಡಿಕೆ ಆತ್ಲೆ, 1992 ರ್ಲಿ ನುಡಿಕೋಶ ಪುಸ್ತಕ ಅವರ ಮಕ್ಕ ಪ್ರಕಟಿಸಿದೊ. ಅವು ಸಣ್ಣ ಮಕ್ಕಳಿಗಾಗಿ ಹಾಡ್‌ಗಳ ಬರ್ದೊಳೊ 'ಹೂವೀಡು' □ ಎಂಬ ಮಕ್ಕಳ 41 ಹಾಡ್‌ಗಳ ಪುಸ್ತಕ ಬರ್ದೊಳೊ. ಮಾತಿಲ್ಲಾ ಮಾತಿಲ್ಲಾ' ಎಂಬ ಶಿಶು ಸಾಹಿತ್ಯನ ಬರ್ದೊಳೊ. ಅನೇಕ ನಾಟಕಗಳ ಬರ್ದೊಳೊ. ಪೌರಾಣಿಕ ,ಐತಿಹಾಸಿಕ, ಚಾರಿತ್ರಿಕ ,ಸಾಮಾಜಿಕ ನಾಟಕಗಳ ಬರ್ದೊಳೊ. ಕೃಷ್ಣ ಲೀಲೆ, ಕೋಳೋರ ಕೊಡಗೂಸು, ಲೋಕತಿದ್ದುವ ವಿಜ್ಞಾನಿ. ತಾಳಿ, ತಲೆಯಂತೆ ಬಾಲ, ಬಡವ, ವರದಕ್ಷಿಣೆ ಮುಂತಾದ ನಾಟಕಗಳ ಬರ್ದ್ ಸಾಲೆನ ಮಕ್ಕಳ ಕೈಯಿಂದ ಆಡ್ಸಿಯೊಳೊ. ಸಾರ್ವಜನಿಕರ್ ಕೂಡಾ ಇವರ ನಾಟಕಗಳ ಆಡಿಯೊಳೊ. ಇವು ಹಲವಾರ್ ಕತೆಗಳ್‌ನ ಸಾ ಬರ್ದೊಳೊ. ಆದರೆ ಅವೆಲ್ಲಾ ತೆರೆನ ಮರೆಲಿ ಇದ್ದ್‌ದ್ ಪ್ರಕಟ ಆತಿಲ್ಲೆ. ಅವು ಸಂಸ್ಕೃತ ಬಾಸೆನ ಸಾ ಕಲ್ತೊಳೊ.
ದಿ|ಕೊಳಂಬೆಯೊವು ಪಡೆಚಾರು ತಮ್ಮೆಟ್ಟಿ ಗೌಡರ ಮಗ ಬಾಲಕಿ ಎಂಬವರ ಮೊದ್ವೆ ಆದೊ. ಆ ದಂಪತಿಗಳಿಗೆ ಹುಟ್ಟಿದ ಸುರುನ ಗಂಡು ಕೂಸು ಚಿದಾನಂದ ಬಾಲಕಿಯೊವು. ಟೀಚರ್ ಆಗಿದ್ದೊ. ಅವು ಸಂಗೀತ ಪಾಟನೂ ಕಲ್ಸ್‌ತಿದ್ದೊ. ಕೊಳಂಬೆಯೊವು ಹರಿಕತೆ ಮಾಡಿಕಾಕನ ಅವರ ಹೆಣ್ಣ್ ಬಾಲಕಿಯೊವು ಸಂಗೀತ ಬಾರ್ಸ್‌ತಿದ್ದೊಗಡ. ಅವು ಅವರ ಎರಡ್ನೇ ಹೆರಿಗೆಲಿ ತೀರಿ ಹೋದೊ. ಕೂಸುನೂ ತಿರಿಹೋತ್. ಸುರುನ ಮಂಞನ ಸಾಕಿಕೆಂತ ಕೊಳಬೆಯೊವು ತುಂಬಾ ಕಷ್ಟಪಟ್ಟೊ. ಅದರೆಲ್ಲ ಅವರ ಆತ್ಮೀಯರೊಟ್ಟಿಗೆ ಹೇಳಿಕಂಡ್ ಕೊಳಂಬೆಯೊವು ತಮ್ಮ ದುಖಃ ಹಂಚಿಕೊಂಬೊತ್ತಿದ್ದೊ
ಕೊಳಂಬೆಯೊವು ಕುಟುಂಬ ಸ್ನೇಹಿ. ಅವು ಕೈ ಹಿಡ್ದ ಹೆಣ್ಣ್‌ನ ಮತ್ತೆ ಮಕ್ಕಳ್  ತುಂಬಾ ಪ್ರೀತಿಸ್‌ತಿದ್ದೊ. ಅವು ಗಂಡ್ ಕೂಸುನ ಭಾರಿ ಕಷ್ಟಲಿ ಸಾಕ್‌ತಿದ್ದೊ. ಅವರ ಕಷ್ಟ ನೋಡಿ ಅವರ ಹಿತೈಷಿಗ ಅವ್ಕೆ  ಭೋಧನೆ ಕೊಟ್ಟ್ ಎರಡ್ನೆ ಮೊದ್ವೆ ಮಾಡ್ಸಿದೊ  ಸುಳ್ಯದ ಪ್ರಸಿದ್ಧ

ಕೊಯಿಂಗೋಡಿ ಮನೆತನದ ದಿ|ಐತಪ್ಪ ಗೌಡ ತಿಮ್ಮಕ್ಕ ದಂಪತಿಗಳ ಹಿರಿಮಗಳ್ ಶ್ರೀಮತಿ ಸೀತಮ್ಮನವರ ಕೈ ಹಿಡ್ದ್ ಆದರ್ಶ್ ಬಾಳ್ವೆ ಬಾಲ್ದೊ. ಈಗ ಸೀತಮ್ಮನವ್ಕೆ 89 ವೊರ್ಸ. ಅವರ ಮಗ ಶಿಲಾವತಿ ಕೊಳಂಬೆನೊವು ತಮ್ಮ ಮಗಳ ಮನೆಲಿ ವಿಶ್ರಾಂತಿ ಜೀವನಲಿ ಒಳೊ.

ದಿ|ಕೊಳಂಬೆಯೊವ್ಕೆ ಮಾಣಿಕ್ಯ ದಂಥಾ ಎರ್ಡ್ ಮಕ್ಕ. ದೊಡ್ಡ ಮಂಜ ಡಾ.ಚಿದಾನಂದನೊವು ಶಿವಮೊಗ್ಗದ ಕುವೆಂಪು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಇದ್ದೊವು. ಭಾರತ ಕೇಂದ್ರ ಸರಕಾರದ ಶಿಕ್ಷಣ ವಿಭಾಗ(ಡಿ.ಆರ್.ಡಿ.ಒ) ಮಾನವ ಸಂಪನ್ಮೂಲ ವಿಭಾಗ (ಎಂ.ಎಚ್.ಆರ್.ಡಿ) ಅಖಿಲ ಭಾರತ ವಿದ್ಯಾ ಪರಿಷತ್ತು (ಎ.ಐ.ಸಿ.ಟಿ.ಇ) ನಿರ್ವಹಿಸಿದೊವು. ಇವುಗಳ ಅನೇಕ ಸಂಶೋಧನೆ ಯೋಜನೆಗಳ ಇವು ಮೈಸೂರು ವಿಶ್ವವಿದ್ಯಾನಿಲಯದ ಸಿಂಡಿಕೇಟ್ ಸದಸ್ಯರಾಗಿ, ಡೀನ್ ಆಗಿ ಸೇವೆ ಸಲ್ಲಿಸಿದೊವು. ಕುವೆಂಪು ವಿಶ್ವವಿದ್ಯಾನಿಲಯದ ಕೋಲ್ಕತ್ತಾದ ಜಾಧವಪುರ ವಿಶ್ವವಿದ್ಯಾಲಯ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯಗಳ ಸಿಂಡಿಕೇಟ್ ಸದಸ್ಯರಾಗಿಯೂ ದುಡ್ದೊಳೊ. ಇವರ ಮೊದ್ವೆ ರಾಷ್ಟ್ರ ಕವಿ ಕುವೆಂಪುರವರ ಮಗಳ್ ತಾರಿಣಿಯವರೊಂದಿಗೆ 1973 ರ್ಲಿ ಆತ್.

ದಿ|ಕೊಳಂಬೆಯವರ ಮಗ ಶೀಲಾವತಿ ಕೊಳಂಬೆಯೊವು ಪ್ರತಿಭಾವಂತೆಯಾಗಿ, ಮಂಗಳ ಗಂಗೋತ್ರಿಲಿ ಸ್ನಾತಕೋತ್ತರ ಪದವಿ ಪಡ್ದೊವು. ವೃತ್ತಿ ಜೀವನಲಿ ದೀರ್ಘಕಾಲ ಉಪನ್ಯಾಸಕಿಯಾಗಿ, ಪ್ರಾಚಾರ್ಯರಾಗಿ, ವಿದ್ಯಾ ಇಲಾಖೆಲಿ ಉಪನಿರ್ದೇಶಕಿಯಾಗಿ ಪ್ರಾಚಾರ್ಯರಾಗಿ ದುಡ್ದೊವು. ಸುಳ್ಯ ತಾಲೂಕು 17 ನೇ ಕನ್ನಡ ಸಾಹಿತ್ಯ ಪರಿಷತ್ತ್‌ನ ಅಧ್ಯಕ್ಷೆಯಾಗಿ 'ಸ್ವಂತಿಕಾ ಸಾಹಿತ್ಯ ಬಳಗ'ದ ಅದ್ಯಕ್ಷೆಯಾಗಿ ಇದ್ದೊವು. ಇವುನೂ ಉತ್ತಮ ಭಾಷಣಗಾರ್ತಿ ಹಾಗೂ ಬರಹಗಾರ್ತಿ. ಇವರ ಗಂಡ ಕೇವಳ ಚೆನ್ನಪ್ಪ ಗೌಡ್ರು ವಕೀಲರಾಗಿದ್ದ್ ಸರಕಾರಿ ಅಭಿಯೋಜಕರಾಗಿದ್ದೊವು. ಈ ದಂಪತಿಗಳಿಗೆ ದಿನಮಣಿ ಮಂಜ ಶ್ರೀಮಣಿ ಎಂಬ ಮಗಳ್ ಒಳೊ.

ದಿ|ಕೊಳಂಬೆಯೊವು ಅವರ ಜೀವಮಾನ ಎಲ್ಲಾ ಸೌಂದರ್ಯೋಪಾಸನೆ, ಚಿಂತನೆ ಮಂತನೆ, ಭೋಧನೆಲಿ ಕಳ್ಯತಿದ್ದೊ. ಅದರ್‌ಂದಾಗಿಯೆ ಅವು ಸಾಲೆಗೆ ಹೋಗಿ ಕಲ್ತದ್ ಬರೇ ನಾಕ್‌ನೇ ಕ್ಲಾಸ್ ಆದರೂ ಆಕಾಸನ ಮುಟ್ಟುವ ಅವರ ಗುರಿ,ಸ್ವಂತ ಸಾಧನೆಂದಾಗಿ ಹಂತ ಹಂತ ಆಗಿ ಖಾಸಗಿ ಪರೀಕ್ಷೆಗೆ ಕುದ್ದ್, ಪಾಸಾಗಿ ಕನ್ನಡ ವಿದ್ವಾನ್ ಪದವಿನ ಪಡ್ದೊ. ಅವು ಶಿಕ್ಷಕ ಆಗಿ ಕವಿಯಾಗಿ, ಕೃಷಿಕರಾಗಿ, ಯಕ್ಷಗಾನ ಅರ್ಥದಾರಿಯಾಗಿ, ಜ್ಯೊತಿಷಿಯಾಗಿ ಹಲವಾರ್ ಕ್ಷೇತ್ರಲಿ ಸಾಧನೆ ಮಾಡ್ದೊವು. ತಮ್ಮ ಎಪ್ಪತ್ತ ಏಳನೇ ಪ್ರಾಯಲಿ (29.01.1981 ) ಅವು ಪರಂಧಾಮ ಗೈದೊ. ಅವರ ನೆಂಪುಗಾಗಿ ಅವರ ಶಿಷ್ಯರ್, ಆಭಿಮಾನಿಗಳೂ ಸೇರಿಕಂಡ್ 1982 ರಲ್ಲಿ ಕೊಳಂಬೆ ಸ್ಮಾರಕ ಸಮಿತಿ' ನ ಸ್ಥಾಪಿಸಿದೊ. ಸಮಿತಿ ಕಡೆಂದ ಅವರ ಎರಡ್ ಪುಸ್ತಕಗಳ ಬಿಡುಗಡೆ ಮಾಡ್ದೊ. ಅವು 'ಅಂಧಕಾಪುರ ಕಾಳಗ' ದ ದ್ವಿತೀಯ ಮುದ್ರಣ ಮತ್ತೆ 'ಮಾತಿಲ್ಲಾ, ಮಾತಿಲ್ಲಾ' ಎಂಬ ಶಿಶುಗೀತೆ ಪುಸ್ತಕ ದಿ| ಕೊಳಂಬೆಯವರ ಸುದೀರ್ಘ ತಪಸ್ಸ್‌ನ ಫಲಂದ ಕಾಲೂರ ಚೆಲುವೆ ನುಡಿವಣಿಗಳು, ಅಚ್ಚಗನ್ನಡದ ನುಡಿಕೋಶ ಪ್ರಕಟಣೆ ಆಗಿ ಲೋಕಾರ್ಪಣೆ ಆಗುಟು. ಇಂದ್ ಅವು ನಮ್ಮೊಂದಿಗೆ ಇತ್ಲರೂ ಅವರ ಕೃತಿಗ ಸ್ಮೃತಿಗ ಅಮರ ಆಗೊಳೊ.

# ಇತಿಹಾಸದ ಕಣ್ಣ್‌ಲಿ ಅರೆಭಾಷಿಗರ್

– ಶ್ರೀಮತಿ ಸರೋಜ ಎಂ.ಟಿ

**ಪ್ರಸ್ತಾವನೆ**

ಅರೆಭಾಷಿಕ ಸಮುದಾಯಾಂತ ನಾವು ಹೇಳ್‌ಕನ ನಾವ್ಗೆ ಗೌಡ ಸಮುದಾಯನೇ ಕಣ್ಣಿಗೆ ಕಟ್ಟಿ ನಿಂತದೆ. ಕಾರಣ ಏನ್? ಅಂದರೆ ಅರೆಭಾಷೆ ತುಳುನಾಡ್‌ದಲ್ಲ ಹಾಂಗೆ ಇದರ ಮಾತಾಡ್ವ ಜನನೂ ತುಳುನಾಡ್‌ನೊವಲ್ಲ. ಈ ಭಾಷೆನ ಚರಿತ್ರೆನು ಭಾರಿ ಪ್ರಾಚೀನ ಅಲ್ಲ. ಇದ್ ಹೊರಗೆಂದ ಬಂದ ಗೌಡ್ರ್‌ಗಳ್ ತಂದದ್ ಎಂಬ ವಿಷಯಲಿ ಚರ್ಚೆ ಇಲ್ಲೆ. ಅರೆಭಾಷಿಕ ಮೂಲದ ಜನ ಇದಕ್ಕೆ ಅಭಿಮಾನ ಪಡೊಕು. ಇಂದ್ ಅರೆಭಾಷೆನ ಮೂಲದ ಗೌಡ್ರ್‌ಗ ಮಾತ್ರ ಮಾತಾಡ್ದು ಅಲ್ಲ. ಅರೆಭಾಷಿಕರ್ ನೆಲೆ ನಿಂತ ಜಾಗೆಲಿ ಎಲ್ಲಾ ಜಾತಿ ಸಮುದಾಯ ದೊವುನೂ ಮಾತಾಡುವೆ. ಇಂದ್ ಅರೆಭಾಷೆ ವಿಸ್ತರಿಸಿಕೊಂಡುಟು. ಒಂದು ಭೌಗೋಳಿಕತೇನ ಸಾಮಾಜಿಕ ಭಾಷೆ ಆಗಿ ಬೆಳ್ದುಟು. ಇದು ಗೌಡ್ರುಗಳ ಕೊಡುಗೆ ಎನ್ನುವ ಕಾರಣಕೆ ಅವ್ ಸಂತೋಷ ಪಡೊಕು.

**ವಲಸೆ ಪೂರ್ವಲಿ ಇಂದ್‌ನ ದಕ್ಷಿಣ ಕನ್ನಡದ ಅರೆಭಾಷಿಕರ್ :**

ಇಂದ್ ಸು. 5 ಲಕ್ಷದಷ್ಟ್ ಇರುವ ಈ ಅರೆಭಾಷಿಕರ್ ಮೂಲತಃ ಯಾರ್? ಒಟ್ಟಾರೆ ತುಳುನಾಡ್‌ಲಿ ಕಾಂಬ ಬಹು ಸಂಖ್ಯಾತ ಗೌಡ್ರ್ ಮೂಲತಃ 'ಗಂಗಡಿ(ಟಿ)ಕಾರ' ಸಮುದಾಯಕ್ಕೆ ಸೇರ್ದವು ಆಗೊಳೊ. ಗಂಗಡಿ(ಟಿ)ಕಾರರ ಕುರ್ತು ಚರ್ಚಿಸುವ ಎಲ್ಲಾ ವಿದ್ವಾಂಸರ್ಗ ಇವು ಗಂಗರ ಮೂಲ ಪರಿವಾರದೊವುಂತ ತೀರ್ಮಾನಿಸ್ಯೊಳೊ. ಗಂಗರು ಶತಮಾನಗಳ್ಲಿ ಕರ್ನಾಟಕನ ಆಳ್ದ ಪ್ರಖ್ಯಾತ ರಾಜವಂಶ. ಹಾಂಗೆ ಕಾಲಾನುಗತ ರಾಜ್ಯ ಕಳಕಂಡ್ ಅವು ಹಳೆ ಮೈಸೂರ್ ಪ್ರಾಂತ್ಯಲಿ ವಿಸ್ತಿರಿಸಿಕಂಡೊ. ಹಾಂಗೆ ಕರ್ನಾಟಕದ ಗಡಿ ಭಾಗ ಆದ ತಮಿಳ್‌ನಾಡ್ನ ಕೊಯಂಪುತ್ತೂರು ಧರ್ಮಪುರಿ ಪ್ರದೇಶಗಳ್ಲಿ, ಆಂದ್ರದ ಪ್ರದೇಶಗಳ್ಲಿ ವಿಸ್ತರಿಸಿಕಂಡ್ ಗೌವುಂಡರ್, ರೆಡ್ಡಿಗ, ಕರ್ನಾಟಕದ ಮಲೆನಾಡ್‌ಲಿ,

ನಾಯಕ, ಹೆಗ್ಡೆ ಅಂತ ಕರ್‍ೊಂಡು, ರೈತಾಪಿಗ ಆಗಿ ತಾವು ಗಂಗ ಕುಲ ಮೂಲದವೆಂದು ಕರ್‍ೊಂಡೊ.

'ಗೌಡ' ಪದ ಜಾತಿ ಸೂಚಕ ಅಲ್ಲ. ಅಧಿಕಾರ ಸ್ಥಾನಿ ಪರಿಕಲ್ಪನೆ ಆಗುಟು. ಗ್ರಾಮದ ಮುಖಂಡ ಎಂಬರ್ಥಲಿ ಈ ಪದ ರೂಪ ಶಾಸನಗಳ್ಲಿನೂ ಪ್ರಯೋಗ ಆವುಟು. ಗಂಗರ ರಾಜ್ಯ ಸ್ಥಾಪಿಸಿದಂವನಾದ 'ದಡಿ'ಯನಿಗೆ ಕೊಂಗುಣಿವರ್ಮ ಎಂಬ ಹೆಸ್ರ್ ಇದ್ದ ಹಾಂಗೆ ಇಂವ ಕ್ರಿ.ಶ 1014 ರ ಶಾಸನವೊಂದರ್ಲಿ ಕೊಂಗುಣಿ ಗಾವುಂಡಂತ ದಾಖಲಾಗುಟು. ಸುಳ್ಯ ಬಳ್ಪದ ಶಾಸನಲಿನೂ 'ಕೆಳದಿಯ ಚೌಡ ಗೌಡರ' ಮಕ್ಕ ಸದಾಶಿವ ನಾಯಕರ್' ಎಂದ್ ದಾಖಲಾಗುಟು. ಮೂಲಲಿ ಯಜಮಾನ ಎಂಬರ್ಥಲಿ ಬಳಕೆ ಇದ್ದ 'ಗೌಡ' ಮುಂದೆ ಜಾತಿ ಸೂಚಕ ಆಗಿ ಬಳಕೆಗೆ ಬಂದುಟು. ತುಳುನಾಡ್‌ಲಿ ವೃತ್ತಿ ಸೂಚಕ 'ಒಕ್ಕಲಿಗ' ಪದನ ಕಳ್ಚಿಕಂಡ್ ಸ್ಥಾನ ನಿರ್ದೇಶನ 'ಗೌಡ' ಪದನ ಮಾತ್ರ ಉಳ್ಸಿಕಂಡುಟು. ಆದರೂ ಸರ್ಕಾರ ನೀಡ್ವ ಜಾತಿ ಪ್ರಮಾಣ ಪತ್ರಲಿ ಇಂದ್ ಸ 'ಒಕ್ಕಲಿಗ ಗೌಡ' ಅಂತನೇ ಇದ್ದದೆ. ತುಳ್‌ನ 'ಬಾರಗ' ಪದ ಭತ್ತ ಬೆಳೆವ ಜಮೀನ್ದಾರ ವರ್ಗನ ಸಾಂಕೇತಿಸಿದೆ. ನಾಡವ, ನಾಡ ಗೌಡ, ಒಕ್ಕಲ್ಮೆ ಪರಿಕಲ್ಪನೆಗ ಬಂಟರನ್ನ ಉಲ್ಲೇಖಿಸಿದೆ.

**ಗೌಡ್ರ್ ಗೌಡ ದೇಶ ಬಂಗಾಳಂದ ಬಂದೊನಾ?**

ಪ್ರಾಚೀನ ಆಗಿ ಇಂದಿನ ಬಂಗಾಳನ 'ಗೌಡ', 'ಗೌಡಿ' ದೇಶ ಅಂತ ಕರೆಯುತ್ತಿದ್ದೊ. ಈ ದೇಶನ ಹಿಂದೆ ಚಕ್ರವರ್ತಿ ಹರ್ಷವರ್ಧನನ ಅಣ್ಣ ರಾಜವರ್ಧನ ಆಳ್‌ತಿತ್ತ್ ಗಡ. ಅವನ ಸಾವಿಗೆ ಕಾರಣ ಆದ ಶಶಾಂಕನ ಮೂಲದವೇ ಗೌಡರೆಂದು ಕಲ್ಪಿಸಲಾಗುಟು. ಅಣ್ಣನ ಕೊಲೆಗೆ ಕಾರಣ ಆದ ವಿದ್ರೋಹಿ ಶಶಾಂಕನ ಪರಿವಾರ 'ಗೌಡಿಗ' ಹರ್ಷವರ್ಧನನ ಕೋಪಕ್ಕೆ ತುತ್ತಾಗಿ ದಕ್ಷಿಣ ಭಾರತಕ್ಕೆ ವಲಸೆ ಆದೊ ಅಂತ ಪ್ರತೀತಿ. ಆದರೆ ಇತಿಹಾಸಕಾರ 'ಬಿ. ಶೇಕ್ ಆಲಿ'ಯವು ಮಾಡುವ ತಾರ್ಕಿಕ ಚರ್ಚೆಲಿ ಈ ಕಲ್ಪಿತಗ ಬಿದ್ದ್ ಹೋದವೆ. ಹಳೆ ಮೈಸೂರು ಭಾಗಲಿ ಗಂಗಡಿಕಾರ, ಆನೆಯವ, ಮುಳ್ಳು ಜನ ಎಂದ್ ಕರಕೊಂಡಿರ್ವ ಒಕ್ಕಲಿಗರ್ ಕನ್ನಡ ನಾಡ್ನವೇ ಆದ ಒಕ್ಕಲಿಗ ಮೂಲದ ಗಂಗರ ಪರಿವಾರದೊವುಂತೇಳ್ದರ್ಲಿ ಅನುಮಾನ ಇಲ್ಲೆ.

ಗೌಡ್ರ್ ಕನ್ನಡ ಮಣ್ಣ್‌ನ ಕೃಷಿ ಮೂಲದೊವು ಆಗಿ ರಾಜ್ಯ ಕಟ್ಟಿದೊ. ಅದರ್ಲಿ ವಿಫಲರಾದ ನಂತರ ಪೂರ್ವ ಪರಂಪರೆ ಹಿನ್ನೆಲೆನ ಹಿರಿಮೆಲಿ ಸಾಮಂತ ಚಕ್ರವರ್ತಿ ಅರಸರ್ಲಿ ಅಧಿಕಾರ ಸ್ಥಾನ ಪಡ್ದಿದ್ದೊ. ಇದ್ ಶಾಸನಲಿ ಸ ದಾಖಲಾಗುಟು. ವಿಜಯನಗರ ಕಾಲದ ಶಾಸನಗಳ್ಲಿ ಗ್ರಾಮದ ಯಜಮಾನ ಎಂಬರ್ಥಲಿ 'ಗೌಡ ಪ್ರಭುಗ' ಎಂದ್ ದಾಖಲಿಸ್ಯೊಳೊ. ಹಳ್ಳಿನ ಆಡಳಿತ ಗಾವುಂಡರ ಅಧಿನಲಿ ಇತ್ತ್. ಇದ್ ಮಲೆನಾಡ್ನ ಅರಸು ಮನೆತನಗಳ ಆಡಳ್ತ ಪದ್ಧತಿಂದ ತಿಳ್ದ್ ಬಂದದೆ. ತುಳುನಾಡ್ನ ಬಂಟರಂಗೆ ಗೌಡ್ರ್‌ಗ ಸ ಮೂಲಃ ಮೀರ ರುದ್ರನ ಪೂಜಕರಾಗಿದ್ದೊ. ಕೆಳದಿ ನಾಯಕರ್, ಬೇಲೂರು ನಾಯಕ, ಯಲಹಂಕ ನಾಡ ಪ್ರಭುಗ ಈ ದೃಷ್ಟಿಲಿ ಲಾಯ್ಕಿನ ಉದಾಹರಣೆಗ ಆಗ್ವೆ.

**ತುಳುನಾಡ್ಗೆ ಅರೆಭಾಷಿಗರ ಪ್ರಸರಣ** : ಸು. 14 ನೇ ಶತಮಾನಂದ ಈ ವಲಸೆ

ಪ್ರಕ್ರಿಯೆ ನಡ್ದುಟು. ಅರೆಭಾಷಿಕ ಗೌಡ್ರು ಶತಮಾನಗಳ ಹಿಂದೆಂದಲೇ ಹಾಸನ ಜಿಲ್ಲೆನ ಸಕಲೇಶಪುರ, ಮಂಜರಬಾದ್, ಮಾರ್‍ನಹಳ್ಳಿ, ಗೊರೂರು, ಹೊಸಕೋಟೆ, ಕುಮಾರಿ ಹಳ್ಳಿ, ದೇವರಬೆಟ್ಟ, ಎಡೆಕುಮೇರಿ, ಹೆತ್ತೂರು, ಆಲೂರು, ಕುಂಡೂರು, ಎಸಳೂರು ಪರಿಸರಲಿ ಗಂಗಡಿಕಾರ್ ಅಂತ ಕರ್‍ಕಂಡ್ ಬಹು ಸಂಖ್ಯೆಲಿ ವಾಸ ಇದ್ದೊ. ಈ ಸ್ಥಳಗ ಎಲ್ಲ ಮಲೆನಾಡ್‌ನ ಬೆಟ್ಟ ಸಾಲ್‌ಲಿದ್ದ್ ತುಳುನಾಡ್/ ದ.ಕ ಜಿಲ್ಲೆಗೆ ಇಳ್ದ್ ಬಾಕೆ ಸುಲಭದ ರಹದಾರಿಗ ಆಗಿರ್‍ವ ಬಿಸಿಲೆ, ಶಿರಾಡಿ, ಬಂಗಾಡಿನ ಕಡ್ತಿಕಲ್ಲ್ ಇತ್ಯಾದಿ ಆಯಕಟ್ಟ್‌ನ ಸ್ಥಳಗಳಿಗೆ ಹೊಂದಿಕೊಂಡೊಳೊ. ಇದ್ ತುಳುನಾಡ್ನ ಆಳುಪರ ಆಳಿಕೆನ ಕಾಲಂದಲೇ ಘಟ್ಟದ ಮೇಲ್ನ ವ್ಯಾಪಾರ ವ್ಯವಹಾರಕ್ಕೆ ಇದ್ದ ದಾರಿಗ ಆಗಿದ್ದೊ, ದೈವಗಳ ಕಥೆಗ ಆಗಿರ್‍ವ ಪಾಡ್ದನಗಳ್ಳಿ ಸ ದೈವಗ 'ನಮೊ ಗಟ್ಟ ಜತ್ತ್ ಬತ್ತೊಂಡೊ' ಅಂತ ದಾಖಲ್ಸಿಕೊಂಡವೆ. ಅದರ್‍ಲ್ಲ್ ಶಿರಾಡಿ, ಪುರುಷ, ಅರಸು ದೈವಗ, ಮಾಡ್ವ ನುಡಿಕಟ್ಟ್‌ಗ ಅರೆಭಾಷಿಕರ್ ಇಳ್ದಬಂದ ದಾರಿನನೇ ನಿರ್ದೇಶಿಸಿಕೊಂಡವೆ. ಅರೆಭಾಷಿಕರ ಪ್ರಸರಣ ದಾರಿಗ ಬಿಸಿಲೆ, ಶಿರಾಡಿ, ಬಂಗಾಡಿಗಳ್ಳಿಯೇ ಆಗುಟು. ಬಂಗಾಡಿಲಿ ಇಳ್ದ ಅರೆಭಾಷಿಗರ್ ಅಚ್ಚ ತುಳುನವೇ ಆಗ್ಯೊಳೊ. ಕಾರಣಂತೇಳ್ರೆ ಬೆಳ್ತಂಗಡಿ, ಪುತ್ತೂರ್‍ನ ಕೆಲಭಾಗಲಿ ಆಕಾಲಲಿ ತುಳುನವು ಹೆಚ್ಚ್ ಸಂಖ್ಯೆಲಿ ವಾಸ ಇದ್ದದ್ದೆ ಕಾರಣ ಆಗಿ ತುಳು ಪ್ರಭಾವ ಆಗುಟು. ಬಿಸಿಲೆ, ಶಿರಾಡಿ ಇಳ್ದ ಅರೆಭಾಷಿಕರ್ ಅರೆಭಾಷೆನ ಉಳ್ಸಿಕೊಂಬಕ್ಕೆ ಕಾರಣ ಉಟ್ಟು. ಸುಳ್ಯ ಪ್ರದೇಶನ ಆಯಕಟ್ಟ್‌ನ ಸ್ಥಳಲಿ ಅರೆಭಾಷಿಕರ್ ನೆಲೆ ಆಕನ, ಇಲ್ಲಿ ಜೈನ ಬಲ್ಲಾಳ್‌ರ್ ಬೀಡುಮನೆಗಳ್ಳಿ ಅಧಿಕಾರ ಸ್ಥಾನಲಿದ್ದೊ. ಬೈರರ್, ಕೊರಗರ್, ಮುಗೇರರ್, ಆದಿ ದ್ರಾವಿಡ ಮನ್ಸರ್, ಮಾಯಿಲರ್, ಮಲೆಕುಡಿಯರ್ ಮೂಲವಾಸಿಗ ಆಗಿ ಕುಮೇರು ಬೆಳಿತಿದ್ದೊ. ಗುಂಪು ಗುಂಪಾಗಿ ಇಳ್ದ ಬಂದ ಅರೆಭಾಷಿಕರ್ ಅಲ್ಲಲ್ಲಿ ಬಲ್ಲಾಳರ ಬೀಡ್‌ಗಳ್ಳಿ ಕರ್ಮಿ ವರ್ಗ ಆಗಿ ನೆಲೆ ನಿಂತಾಗ ಅವರ ಭಾಷೆ ಉಳಿಯಕೆ ಕಷ್ಟ ಆತ್ಲೆ.

ಅರೆಭಾಷಿಗ ಗೌಡರ ಪ್ರಸರಣಕ್ಕೆ ಕಾರಣ: ಹಲ ಕಾರಣನ ಜನ ಪ್ರತೀತಿಯಾಗಿ ಹೇಳ್ತಾ ಒಳೊ. ಇವು ಬರ್‍ದು ದಾಖಲಾದ ಸಂಗತಿಗ ಅಲ್ಲ; ಆ ಪ್ರಕಾರ ಐಗೂರು ಸೀಮೆಲಿ ಕೆಂಡದ ಮಳೆ ಬಂದ್ ಹೇಮಾವತಿ ನದಿ ಬತ್ತಿ ಹೋದ್ದ್, ಬೇಲೂರಿನ ಪಾಳೆಗಾರ ಹಾಂಗೆ ಐಗೂರು ಸೀಮೆನ ಆಳಿಕೊಂಡಿದ್ದ ಕೃಷ್ಣಪ್ಪ ಮತ್ತು ರಂಗಪ್ಪ ನಾಯಕರ ಕ್ರೂರ ಆಡಳ್ತ ಅಂತ ಹೇಳ್ವೆ. ಇದರೊಟ್ಟಿಗೆ ಕೆಳದಿಯ ಅರಸರ ಜಾತಿ ಪ್ರೇಮವೂ ಕಾರಣ ಆಗುಟುಂತನೂ ಹೇಳ್ತೊ ಒಳೊ. ಕೆಳದಿ ಅರಸಗ ಲಿಂಗಾಯತರಾದರೂ ಜಾತಿಲಿ ಗೌವುಡ ಮೂಲದವೇ ಆಗಿದ್ದೊ.

ವಿಜಯನಗರದರಸ ಆಗಿದ್ದ ಸದಾಶಿವರಾಯ (ಕ್ರಿ.ಶ. 1550) ಸಾಮಂತರಸ. ಕೆಳದಿಯ ಸದಾಶಿವ ನಾಯಕಂಗೆ ತುಳುನಾಡ್‌ನ 'ಅಮರ ಮಾಗಣೆ' ಅಂತ ಬಿಟ್ಟು ಕೊಟ್ಟಿತ್. ಆ ಕಾಲಲಿ ತುಳುನಾಡ್‌ನ ಅಧಿಕಾರ ನೋಡಿಕಂಬಕ್ಕೆ ದಂಡನಾಯಕರ ಕಳುಹಿಸಿಕೊಡುತ್ತಿದ್ದೊ. ಹಾಗೆ ಬಂದ ದಂಡ ನಾಯಕರ್ ಇಲ್ಲಿ ಪಾಳೆಗಾರರಾಗಿ ನೆಲೆ ನಿತ್ತೊ. ಅವರೊಟ್ಟಿಗೆ ಪರಿವಾರವಾಗಿ ಬಂದ ಅರೆಭಾಷಿಕರ್ ಇಲ್ಲಿ ನೆಲೆಯಾದೊ.

ಲಿಂಗಾಯತ ಕುಟುಂಬದವು ಗೌಡರ್ ಆದ ಕುರ್ತು ಹಲ ಐತಿಹ್ಯಗ ನಮ್ಮಲ್ಲಿಟ್ಟು, 'ಮೂಡು ಕಟ್ಟೆಮನೆ' ಕೂಜುಕೊಡ್‌ನ ಕುರಿತ ಐತಿಹ್ಯನೇ ಉದಾಹರಣೆ ಆದೆ. ಬಳ್ಳಡ್ಕ ಮನೆತನ ಈ ದೃಷ್ಟಿಲಿ ಪ್ರಸಿದ್ಧವಾಗಿಟ್ಟು.

ಮತ ಮೂಲ ಕಾರಣ ಆಗಿಯೂ ಅರೆಭಾಷಿಕರ ವಲಸೆ ಆಗುಟು. ಸುಳ್ಯ ಸೀಮೆಲಿ ಬಲ್ಲಾಳರ ತರುವಾಯ ಅಧಿಕಾರ ನಡ್ಸಿದ ಕೇರಳ ಮೂಲನ 'ಚಾತುನಾಯರ್' ಶೃಂಗೇರಿ ಮಠ ಪತಿಗಳ ಅನುಮತಿ ಮೇರೆಗೆ ಶಿರಾಡಿ, ಬಿಸಿಲೆ, ಸುಬ್ರಹ್ಮಣ್ಯ ದಾರಿಲಿ ತಂಡ, ತಂಡ ಅರೆಭಾಷಿಕರ ಕರೆತಂದ್ ಗ್ರಾಮಗಳ್ಲಿ, ಮುನ್ನೂರು, ಮೂವತ್ತ್, ಹತ್ತು ಒಕ್ಲುಗ ಅಂತ ನೆಲೆಗೊಳಿಸಿಟು. ಅವು ಇಂದ್ ಸಹ ಹಾಂಗೆ ಕರೆದುಕೊಂಡವೆ.

ಐಗೂರು ಸೀಮೆಂದ ಅರೆಭಾಷಿಕ ಗೌಡರ್ ಹೀಗೆ ತುಳುನಾಡಿಗೆ, ಮುಖ್ಯ ಆಗಿ ಗುಂಡ್ಯ, ಸುಬ್ರಹ್ಮಣ್ಯ, ಗುತ್ತಿಗಾರ್, ಮರ್ಕಂಜ, ಅರಂತೋಡು, ತೊಡಿಕಾನ, ಕರಿಕೆಲಿ ಆರಂಭಲಿ ನೆಲೆಯಾಗಿ ನಿಂತೊ. ಈ ವಲಸೆ ಪ್ರಕ್ರಿಯೆ ಒಂದೇ ಸಲ ಆತ್ಲೆ. ಸು 14ನೇ ಶತಮಾನಂದ 17ನೇ ಶತಮಾನದವರೆಗೆ ನಡ್ದುಟು.

**ಕೊಡಗ್‌ಲಿ ಅರೆಭಾಷಿಕ ಗೌಡರು:–** ಕೊಡಗಿಗೆ ಅರೆಭಾಷಿಕರು 17ನೇ ಶತಮಾನದ ಕೊನೆಲಿ ವಲಸೆ ಆದೊ. ಕೊಡಗ್‌ಲಿ ಈಗ ವಾಸ ಇರುವ ಕುಟುಂಬಗ ಸುಳ್ಯ ಪ್ರದೇಶಲಿರುವ ಪ್ರಧಾನ ಮನೆಗನೊಟ್ಟಿಗೆ ಗುರುತಿಸಿಕೊಂಡವೆ. ಕೆದಂಬಾಡಿ, ಉಳುವಾರು, ಕುಡೆಕಲ್ಲು, ದಂಬೆಕೋಡಿ, ನಂಗಾರು, ಕುದ್ಪಾಜೆ, ದೇರಾಜೆ ಹಿಂಗೆ................ ಕೊಡಗಿಗೆ ಅರೆಭಾಷಿಗ ಗೌಡರು ವಲಸೆ ಆಕ್ಕೆ ಕೆಂಡದ ಮಳೆಯ ಕಾರಣ, ಕುಲನಾಶ ಇತ್ಯಾದಿ ಕಾರಣನ ಹೇಳ್ವೆ.

ಒಂದು ಶತಮಾನದಷ್ಟು ದೀರ್ಘ ಕಾಲಲಿ ಕೊಡಗಿಗೆ ಅರೆಭಾಷಿಕರು ಘಟ್ಟ ಮೂಲಕ ವಲಸೆ ಆಗಿ ಭಾಗಮಂಡಲ ಮುಂತಾದ ಪ್ರದೇಶಗಳ್ಲಿ ನೆಲೆನಿಂತೊ. ಕೊಡಗಲಿ ನೆಲೆನಿಂತ ಅರೆಭಾಷಿಕರಿಗೆ ಭೂಮಿ ಹಕ್ಕ್‌ನ ಕ್ರಿ.ಶ. 1805 ರಲಿ 'ದೊಡ್ಡವೀರರಾಜ' ನೀಡ್ದ ನಿರೂಪ –ಸನದು ಒಂದು ಹೀಗುಟ್ಟು, "ಶ್ರೀಮತು ಅರಮನೆ ಶೀಮೆವಳಿತವಾದ ಮುತ್ತಾರು ಮುಡಿ ಗ್ರಾಮದಲ್ಲಿ ಇರುವ ಸುಳ್ಯ ಸೀಮೆ ಅರಂತೋಡು ಮಾಗಣೆ ಪಾರೆಮಜಲು ತುಳುವರ ತಿಂಮಪುಗೆ ಅಪ್ಪಣೆ ದಯಪಾಲಿಸಿದ ಸನದು ಬುದಿ ನಿರೂಪ – ಅದಾಗಿ ಈಗ ನಿನಗೆ ಹೊಸ್ತಾಗಿ ಜಂಮಕ್ಕೆ ಇದೇ ಗ್ರಾಮದಲ್ಲಿ ಕುಳ ನಷ್ಟವಾಗಿರುವ ಕೊನ ಕುಂಡರ ಭೂಮಿ 250 ಭಟ್ಟಿ ಬೆಳಂಚಟ್ಟ ಭೂಮಿ 250 ಭಟ್ಟಿ. ಈ ಭೂಮಿಯನ್ನು ನಿನ್ನ ಪೌತ್ರ ಪಾರಂಪರ್ಯವಾಗಿ ಜಂಮವಾಗಿ ಅನುಭವಿಸಿಕೊಂಡು ಸ್ವಾಮಿಕಾರ್ಯ ಮುಖ್ಯವಾಗಿ ನಡಕೊಳ್ಳುವುದು ಅಪ್ಪಣೆ" ಇದ್ ಅರೆಭಾಷಿಕರು ತುಳು ಪ್ರದೇಶ ಸುಳ್ಯಂದ ಕೊಡ್ಗ್‌ಗೆ ಹೋಗಿ ನೆಲೆನಿಂತ ಕುರ್ತ್ ಆಧಾರ ಆದೆ.

**ಅರೆಭಾಷಿಕರ ಐನ್‌ಮನೆಗ ಮತ್ತು ಕಟ್ಟೆಮನೆಗ :**

ಒಕ್ಕಲಿಗ ಮೂಲ ಅರೆಭಾಷಿಕರ್ ಹಾಸನದ ಐಗೂರು ಸೀಮೆಂದ ತುಳುನಾಡ್‌ಗೆ ವಲಸೆ ಆದ ಕಾಲ ಘಟ್ಟಲಿ ಅವರ ಜೀವನ ಹೇಗಿರ್ದು? ಯೋಚನೆ ಮಾಡಿಕೆ ಆದುಲೆ; ಕಲ್ಪನೆಗೆ ನಿಲುಕುದುಲೆ. ಬಹುಷ: ಆಗ ಅವು ಇಂದು ಹೊರಗ್‌ಂದ ನಮ್ಮಲ್ಲಿಗೆ ಕೆಲ್ಸ

ಹುಡುಕಿಕಂಡ್ ಬರುವ ಜನಗಳಂಗೆ ಇದ್ದಿರ್‍ದೊ. ಇಂದ್ ಅರೆಭಾಷಿಕರ್ ಹೊಂದಿರುವ 'ಯಜಮಾನಿಕೆ'ನ ಅಂದ್ ಪಡ್ದಿರ್‍ವ ಸಾಧ್ಯತೆ ಇಲ್ಲೆ. ಆಗ ಅವು ಅಧಿಕಾರ ಸ್ಥಾನಿ ಬೀಡು ಬಲ್ಲಾಳ ಬೀಡ್‌ಗಳ್ಲಿ ಕೆಲಸದವರಾಗಿ, ಉಳುಮೆಗಾರರಾಗಿ ಸೇರಿಕೊಂಡೊ. ಬಂಗಾಡಿ, ಶಿರಾಡಿಲಿ ಅಚ್ಚೆ ತುಳುನಾಡಿಗೆ ಇಳ್ದ ಅರೆಭಾಷಿಗರ್ ತಮ್ಮ ಭಾಷೆನ ಸ ಉಳಿಸಿಕೊಂಬಕ್ಕೆ ಆತ್‌ಲೆ. ಇನ್ನ್ ಯಜಮಾನಿಕೆನ ಮಾತ್ ಎಲ್ಲಿಂದ ಬರೋಕು? ಅಲ್ಲಿನ ಅರೆಭಾಷಿಕರ್, ತುಳುವರಾಗಿ ಶಿಕ್ಷಣ– ಭೂಮಿ ಹಕ್ಕ್ ಪಡ್ಯೋಕಾದರೆ 20ನೇ ಶತಮಾನದ 70ರ ದಶಕಲಿ ಬಂದ ಭೂ ಸುಧಾರಣೆ ಕಾಯ್ದೆಯವರೆಗೆ ಕಾಯೋಕಾತ್.

ಒಂದ್ ಕಾಲಲಿ ಗ್ರಾಮಾಧಿಕಾರದ ನೆಲೆಲಿ 'ಗಾವುಂಡ'ರೆಂದ್ ಕರ್‍ದೊಂಡ್ ಇದ್ದ ಇವು ಗೇಣಿ ಒಕ್ಕಲ್ಗ ಆಗಿ ದುಡಿಯೊಕಾಗಿತ್ತ್. 'ಗಾವುಂಡ' ಸ್ಥಾನಲಿ ಅವು ಗುರಿತ್ಸಿಕೊಣಕಾದರೆ ಕಾಲದ ಗತಿಲಿ ಹೆಜ್ಜೆ ಹಾಕೊಕಾತ್; ಇಲ್ಲೆ ಸಂಘರ್ಷದ ನೆಲೆಲಿ ಸಂಪಾದಿಸೋಕಾತ್.

ವಲಸಿಗ ಅರೆಭಾಷಿಕ ಗೌಡ್ರ್‌ಗ ಪ್ರಬಲ ಶಕ್ತಿಗ ಆಗಿದ್ದ ಬೀಡು ಬಲ್ಲಾಳ ಮೂಲಲಿ ಗುರುತಿಸಿಕಂಡ ಕಾಲದ ಗತಿ–ಸ್ಥಿತ್ಯಂತರಗ ಹೇಂಗಿತ್ತ್ ಅನ್ನುದರ ಕೆಲ ಗೌಡರ ಮನೆತನ ಮೂಲ ಹಲ ಐತಿಹ್ಯಗಳ್‌ಂದ ತಿಳಿಯಕ್ಕೆ ಸಾಧ್ಯವುಟ್ಟು.

ಉದಾ: 1 ಹಾಸನದ ಐಗೂರು ಸೀಮೆಂದ ಶಿರಾಡಿ ಘಟ್ಟ ಮೂಲಕ ತುಳುನಾಡಿಗೆ ಬಂದ ನಾಲ್ಕು ಜನ ಗೌಡರಲ್ಲಿ ಒಬ್ಬ ಅರಂತೋಡು ಎಂಬಲ್ಲಿಗೆ ಬಾತ್. ಅರಸು ಮಜಲ್ನ ಅಳಿಕೆ ಬೀಡು ಬಿಲ್ಲಾಳರಲ್ಲಿ ಅಂವ ಕೆಲ್ಸಕ್ಕೆ ಸೇರಿ ಕಂಡತ್. ಆಗ ತೊಡಿಕಾನ ಪ್ರದೇಶನ ಈ ಬಲ್ಲಾಳಗ ಆಳುತ್ತಿದ್ದೊ. ಹೀಗೆ ಸೇರ್‍ಕಂಡ ಗೌಡ. ಆರ್ತೋಟ್ಟ್‌ನ ಬಲ್ಲಾಳರ ಭೂಮಿನ ಉಳುಮೆ ಪಡ್‌ಕಂಡಿತ್ತ್. ಬಲ್ಲಾಳ ಸಂತತಿಲಿ ಕೊನೆಯ ದೈಯಕ್ ಬಲ್ಲಾಳ್ತಿಗೆ ಮಕ್ಕಳಾತಿಲೆ. ಈ ಕಾಲಲಿ ಗೌಡ ಸಂತತಿನ 'ತಿಮ್ಮ' ಈ ಬಲ್ಲಾಳ್ತಿನ ವ್ಯವಹಾರಿಯಾಗಿ ಸೇರಿಕಂಡತ್. ಮುಂದೆ ಸಂತತಿ ಹೀನೆಯಾಗಿ ಬಲ್ಲಾಳ್ತಿ ಸತ್ತು ಹೋಕನ ಇಂವನೇ ಬಲ್ಲಾಳ್ತಿನ ಆಸ್ತಿಗೆ ಹಕ್ಕ್ ಬಾಧ್ಯನಾತ್. ಹೀಗೆ ಉಳುಮೆಗಾಗಿ ಸೇರ್‍ಕಂಡ ತಿಮ್ಮನ ಸಂತತಿ ಮುಂದೆ ಉಳುವಾರ್ ಮನೆತನ ಆತ್. ಮುಂದೆ ವಾಸ ಮಾಡುವ ಮನೆ ಐನ್‌ಮನೆ ಆತ್. ಈ ಐನ್‌ಮನೆ ಬೇರೆ ಮನೆಗಳ್‌ಂದ ಭಿನ್ನವಾಗಿಟ್ಟು.

ದೈವ– ದೇವ್ರುಗ, ಜೀವನಾವರ್ತನದ, ವಾರ್ಷಿಕಾವರ್ತನದ ಸಮಸ್ತ ಸಾಂಸ್ಕೃತಿಕ ಆಚರಣೆಗ ಕುಟುಂಬದ ಸಮಸ್ತರ ಒಗ್ಗೂಡುವಿಕೆಂದ ಈ ಮನೆಲಿ ನಡ್ದದೆ. ಇವ್ ಐತಿಹಾಸಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ, ಆಡಳಿತಾತ್ಮಕ ಮಹತ್ವ ಪಡ್ದಿದ್ದದೆ.

ತುಳುನಾಡ್ನ ಪಡ್ಸಿರೆ ಮನೆ, ಬಯಲ್ ಸೀಮೆನ ತೊಟ್ಟಿ ಮನೆಗಳ ರಚನೆಗೆ ಅರೆಭಾಷೆ ಗೌಡ್ರುಗಳ ನಾಲ್ಕಂಕದ ಮನೆ ರಚನೆನ ತೌಲನಿಕವಾಗಿ ನೋಡ್ರೆ, ಅವೆರಡಕ್ಕೂ ಪರಸ್ಪರ ಹೊಂದಾಣಿಕೆ ಇರ್ದು ಕಂಡದೆ. ಇವು ಬಯಲ್ ಸೀಮೆಂದ ಬಂದವಾದ್ದರ್‌ಂದ ತೊಟ್ಟಿಮನೆ ರಚನೆನ ಸಂಕಲ್ಪಿಸಿರ್ದರ್‍ಲಿ ಆಶ್ಚರ್ಯ ಇಲ್ಲೆ. ಸಾಮಾನ್ಯ ವಾಸದ ಮನೆಗ ಭೌಗೋಳಿಕ ಪರಿಸರನ ಅನುಲಕ್ಷಿಸಿ ನಿರ್ಮಾಣ ಆದವೆ. ಈ ನೆಲೆಲಿ ತುಳುನಾಡ್‌ಗೆ ಬಂದ್ ನೆಲೆಸಿದ ಗೌಡ್ರುಗ ಇಲ್ಲಿನ ಗುತ್ತು ಬೂಡುನ 'ಸುತ್ತು ಪಡ್ಸಿರೆ ಮನೆ'ಗೆ ಸಮಾನಾಂತರ ಆಗಿ ಐನ್‌ಮನೆ/ ನಾಲ್ಕಂಕಣದ ಮನೆ ಕಟ್ಟಿರುವ ಸಾಧ್ಯತೆ ಉಟ್ಟು. ಅಧಿಕಾರ ಸ್ಥಾನದ

ಪ್ರತಿನಿಧಿಗ ಆಗಿ ಊರು-ಗ್ರಾಮ ಅಧಿಕಾರನ ನಡ್ಸಿಕೊಂಡು ಬರ್‍ವ ಹಿನ್ನೆಲೆಲಿ ಸಾಮಾಜಿಕ, ಧಾರ್ಮಿಕ ವ್ಯವಸ್ಥೆನ ಮೇಲೂ ಹಿಡಿತ ಮಾಡ್ದು ಸಾಮಾನ್ಯ. ಇಲ್ಲಿಗೆ ಪೂರಕ ಆಗಿ 'ಸುತ್ತುಪಡ್ಸಿರೆ' ಮನೆಗ ಇತರ ಸಾಮಾನ್ಯ ಮನೆಗಿಂತ ಬೇರೆ ಆಗಿರ್ದು ಸಹಜ, ಇದರ ರಚನೆನೂ ಸ ಶ್ರೇಣೀಕೃತ ಸಮಾಜ ವ್ಯವಸ್ಥೆನ ಪ್ರತಿನಿಧಿಸುವಂತಿರಕಾದ್ದ್ ಅನಿವಾರ್ಯ. ಹಂಗಾಗಿ ಸುತ್ತಂಕಣದ ಸುತ್ತು ಪಡ್ಸಿರೆನ ವಿಶಾಲವಾದ ಚಾವಡಿ, ಕೆತ್ತನೆ ಕಂಬಗ ಉಯ್ಯಾಲೆಲಿರ್‍ವ ದೈವಭಂಢಾರ ಇವೆಲ್ಲ ಮನೆಗೆ ಭವ್ಯತೆನ ತಂದ್ ಕೊಟ್ಟದೆ. ಇಂತಹ ಮನೆ ಚಾವಡಿಲಿ ಮನೆಯ ಯಜಮಾನ ದೈವ ಪ್ರತಿನಿಧಿ ಎನ್ನುವ ನೆಲೆಲಿ ಪಂಚಾತಿಗೆ ಮೂಲಕ ನ್ಯಾಯ ತೀರ್ಮಾನ ಕೊಟ್ಟ್ ಕುಟುಂಬದ ಸಮಸ್ಯೆನ ಬಗೆಹರ್‍ಸಿಕಂಡವೆ. ಇದೇ ರೀತಿಲಿ ಗೌಡ್ರ ಐನ್‌ಮನೆನ ಚಾವಡಿನೂ ಮಹತ್ವ ಪಡ್ದದೆ.

ಗೌಡ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ಸಂರಚನೆಗ ಕಟ್ಟೆಮನೆಗಳ್‌ಂದ ನಿಯಂತ್ರಿತ ಆದವೆ.

ಬಯಲ್ ಸೀಮೆಲಿ ಗೌಡ್ರುಗ ಗಂಗಡಿಕಾರರ್ ಎಂದ್ ಕರ್‍ಕಂಡವೆ. ಅದೇ ಮೂಲಂದ ಬಂದಿರ್‍ವ ಗೌಡ್ರ್‌ಗಳಿಗೆ ಬಳಿ/ಗೋತ್ರವೆನ್ನುವ ಪದ್ಧತಿ ನಂತರ ಸೇರಿಗೆ ಆವುಟು. ಮೂಲಲಿ ಅದ್ ಇತ್ಲೆ. ಗೌಡ್ರಿಗಿಂತ ಪೂರ್ವಲಿ ವಲಸಿಗರಾಗಿದ್ದ ಬಂಟ, ಬಿಲ್ಲವ ಇವ್ಕೆನೂ 'ಬಳಿ' ಪದ್ಧತಿ ಉಟ್ಟು, ಗೌಡ್ರುಗ ಗುರ್ತಿಸಿಕೊಂಡಿರ್‍ವ 18 ಬಳಿಗಳ್ಲಿ ಮೂಲ ಬಳಿಗ ಬಂಗರ, ನಂದರ, ಮೂಲರ ಇವೆಲ್ಲ ತುಳುನಾಡ್ನ ಆಳ್ದ ಜೈನ ಬಲ್ಲಾಳ ವಂಶದ ಹೆಸರನ ಹಾಂಗೆ ಗೋಚರಿಸ್ತದೆ. ತುಳುನಾಡ್ನ ಮೂಲ ನಿವಾಸಿಗ ಆಗಿರುಂವ ಮಲೆಕುಡಿಯ, ಮುಗೇರ ಇವ್ಕೆ ಬಳಿ ಉಟ್ಟು. ಬಹುಷಃ ಅಧಿಕಾರ ಸ್ಥಾನಿ ಬಲ್ಲಾಳರ್ ಈ ಮೂಲನಿವಾಸಿಗಳಿಗೂ ಇದರ ನೀಡಿರೊಕು. ಹಾಂಗೆ ಕಲಾಂತರಲಿ ಗುಂಪು ಗುಂಪಾಗಿ ಬಂದ ಗೌಡ್ರ ಗುಂಪುಗಳಿಗೂ ಪ್ರತ್ಯೇಕ ಗುರುತ್ತಾಗಿ ಈ ಬಳಿನ ಇವೇ ನೀಡಿರೊಕು. 'ಬಳಿ'ನು ಗೋತ್ರನು ಒಂದೇ ಆಗಿರ್‍ಕೆ ಸಾಧ್ಯ ಇಲ್ಲೆ. ಗೋತ್ರ ಗೋಷ್ಠಿಂದ ಬಂದದ್ದ್. ವಿಶ್ವಾಮಿತ್ರ, ವಶಿಷ್ಟ ಇದೆಲ್ಲಾ ವೈದಿಕರ ಗುರು ಪರಂಪರೆಂದ ನಿಷ್ಪನ್ನವಾದ ಗೋತ್ರಗ. ವರ್ತಮಾನಲಿ 'ಬಳಿ' ಗೌಡ್ರಗಳ್ಲಿ ಮೂಲ ಮತ್ತು ಪ್ರಬಲ ಘಟಕವಾಗಿ ಕಾರ್ಯ ನಿರ್ವಹಿಸಿಕಂಡ್ ಉಟ್ಟ್, ಕುಟುಂಬದೊಳಗೆ ಮದುವೆ ಆಗುದರ ನಿಯಂತ್ರಿಸಿಕೆ ಸಹಾಯ ಆಗುಟು/ ಇಷ್ಟ -ಅನಿಷ್ಟ ದೃಷ್ಟಿಲಿ ಕೆಲ ಮುಖ್ಯ ಆಗಿ ಗುಂಡೆರ ಬಳಿಯೊವ್ಕೆ ಇದ್ ಋಣಾತ್ಮಕ ಆಗಿ ಪರಿಣಮಿಸಿಟು.

ಅರೆಭಾಷೆ ಗೌಡ್ರುಗ ಬಲ್ಲಾಳರಲ್ಲಿ ನೆಲೆ ನಿಂತ್ ಬಲ್ಲಾಳರ್ ನಿಸ್ಸಂತತಿ ಆದ ಮೇಲೆ ಅವರ ಭೂ ಆಸ್ತಿ ಪಾಸ್ತಿಗೆ ಹಕ್ಕುದಾರರಾದ ಮೌಖಿಕ ಸಂಕಥನಗ ಸುಳ್ಯಲಿ ಬಹು ಸಂಖ್ಯೆಲಿ ಸಿಕ್ಕುವೆ. ಸುಳ್ಯ ಕೇಂದ್ರಲಿ ಪನ್ನೆ ಬೀಡು ಇತ್ತ್, ಈ ಪನ್ನೆ ಬೀಡು ವರ್ಮ ಬ್ಲಲಾಳನ ಆಸ್ತಿ. ಆ ಮೂಲದ ಕೃಷ್ಣ ಬಲ್ಲಾಳಂಗೆ ನಾಯರ್ ಸ್ತ್ರೀಲಿ ಹುಟ್ಟಿದ 'ಚಾತು ನಾಯರ್‌ಗೆ ಈ ಆಸ್ತಿ ಹೋದೆ. ನಾಯರ್ ಬಳಿಕ ಪನ್ನೆ ಬೀಡ್ನ ಕವಲಾಗಿದ್ದ ಸುಮಾರು ಎಂಟ್ ಉಪ ವಿಭಾಗಗಗಳ ಆಸ್ತಿ ಜೊತೆಗೆ ಈ ಆಸ್ತಿಲಿದ್ದ ದೈವ ದೇವ್ರುಗ ಎಲ್ಲಾ ಗೌಡ ಸಂತತಿಗೆ ವರ್ಗಾವಣೆ ಆದೆ. ಆ ಸಂಬಂದಿ ಐತಿಹ್ಯಗಳ ಹಿನ್ನೆಲೆಲಿ

1. ಅಕ್ಕು ಬಲ್ಲಾಳ್ತಿ - ಸುಳ್ಯ ಪನ್ನೆ ಬೀಡು-ಕಾನತ್ತಿಲ ದೈವಗ - ಕುರುಂಜಿ ಗೌಡ್ರಿಗೆ

2. ಚೋಮು ಬಲ್ಲಾಳ್ತಿ  ಇದ್ಯಡ್ಕ ಬೀಡು– ಪರಿವಾರಕಾನ ಗೌಡ್ರುಗ (ಊರ್ಜಿತಲಿ ಇಲ್ಲೆ.)
3. ಚೆನ್ನು ಬಲ್ಲಾಳ್ತಿ– ಸುಳ್ಯ ಕೋಡಿ, ಕೊಟ್ಟಾರ– ಮಿತ್ತೂರು ದೈವ– ಸುಳ್ಯ ಕೋಡಿ ಗೌಡ್ರುಗ
4. ಮಾಣಿಕ್ಯ ಬಲ್ಲಾಳ್ತಿ  – ಬಲ್ನಾಡು, ಮರ್ಕಂಜ, ಮರ್ಕಂಜ ದೈವಗ– ಗೌಡ,ಜೈನ, ಬಂಟ್ರಗ.
5. ದೈಯಕ್ಕು ಬಲ್ಲಾಳ್ತಿ– ಅಳಿಕೆ ಮಜಲ್ ದೈವಗ– ಉಳುವಾರು ಗೌಡ್ರುಗ
6. ಸೋಮು ಬಲ್ಲಾಳ್ತಿ – ಸೋಮ ಕೊಟ್ಟಾರ–ಪೆರಾಜೆ ದೈವಗ– ಮೂಲೆ ಮಜಲು ಗೌಡ್ರುಗ
7. ಪಾಚಿ ಬಲ್ಲಾಳ್ತಿ– ಕುಕ್ಕಂದೂರು ಬಿಡು, ಕುಕ್ಕಂದೂರು ದೈವಗ– ಕುದುರೆಕುಂಞ ಮೂಲ ಗೌಡ್ರುಗ
8. ಚಿರ್ದೆಯಿ ಬಲ್ಲಾಳ್ತಿ ಅರಸು ಮಜಲ್ ಬೀಡು–ಬಜಪಿಲ ದೈವಗ– ಊರು ಗೌಡ್ರುಗ ಪೇರಾಲ್

ಇವೆಲ್ಲವ್ವೂ ಪ್ರತ್ಯೇಕ ಐತಿಹ್ಯಗ ಒಳೊ. ಇವು ಬಲ್ಲಾಳರ ಬೀಡು, ಆಸ್ತಿ, ದೈವಗ ಹಸ್ತಾಂತರ ಆದ ಬಗ್ಗೆ ಕಥಿಸುವೆ."ಸುವರ್ಣ ಪುತ್ಥಲಿ" ಕೊಲ್ಂದ  ಕೊಟ್ಟಾರದವು ಉಂಬಳಿ ಭೂಮಿನ ಅಳ್ದ್ ಕೊಟ್ಟೆಂತೇಳ್ದು ಈ ಕಥನಗ ಹೇಳುವ ಪ್ರದಾನ ಸಂಗತಿಗ. ಆದರೆ ಇಲ್ಲೊಂದು ಸಂಘರ್ಷ ನಡ್ದಿರ್‍ವ ಬಗ್ಗೆ ದೈವಕಲಾವಿದರ್ ಹೇಳ್ವ ನುಡಿಗಟ್ಟಲಿ ಗೋಚರ್ಸಿದೆ. ಬಲ್ಲಾಳ ಕಾಲದ ಪೂರ್ವ ಕಟ್ಟಲೆ ಅನ್ಯಾಯ ಮಾಡ್ದ ಬಲ್ಲಾಳ ಸಂತತಿನ ನಾಶ ಮಾಡಿ ನಿಮ್ಮ ಬೆನ್ನ ಹಿಡ್ದೋ ಎಂದ್ ಅವು ಹೇಳುವಲ್ಲಿ ಇದ್ ಕಂಡದೆ. ಕೆಲ ನುಡಿಕಟ್ಟ್‌ಗ ನಿರ್ಧಿಷ್ಟ ಮನೆತನನ ಉದ್ದೇಶಿಸಿದ್ದವೆ. ಉದಾ: ಎರ್ಡ್ ಗುತ್ತು ನೂರಾಳ್ ಸೀಮೆಲಿ ಉಳುವಾರ್‌ನವು ಬುದ್ಧಿವಂತರ್, ಬಲ್ಲಾಳ್ ಪ್ರತಿ ಬಲ್ಲಾಳ್ ಆಗಿ ನಿಮ್ಮವರ ಕೈ ಸೋರ್‍ದೊ. ಈ ಮಣ್ಣ್‌ಲಿ ನೆಲೆ ಊರ್‍ದ ನಿಮ್ಮ ಬೆನ್ನ್ ಬಿಡೆವು' ಎಂದವೆ. ಈ ಮಾತ್‌ನ ಒಳ ಮರ್ಮಲಿ ಬಲ್ಲಾಳ ಕಾಲದ ಪೂರ್ವ ಪರಂಪರೆನ ಪ್ರಬಲ ಸಮುದಾಯ ಮುಂದುವರಿಸುವಲ್ಲಿ ಘಟಿಸಿರುವಂತ ಒಂದು ಸಂಘರ್ಷ ಸ್ಥಿತ್ಯಂತರದ ಚಾರಿತ್ರಿಕತೆನ ತಿಳಿಯಕೆ ಅವಕಾಶ ಉಟ್ಟು.

ತುಳುನಾಡ್‌ಲಿ ಸಾಮಾನ್ಯವಾಗಿ ಜೈನ ಬಂಟರಿಗೆ ಆಸ್ತಿಯ ಹಸ್ತಾಂತರಂದಾಗಿ ಬೇರೆವ್ವೂ ಸುತ್ತು ಪಡ್ಡಿರೆಂತೇಳ್ವ ಮನೆಗ ಒಳೊ. ಸುಳ್ಯಲಿ ಯಜಮಾನ ಸ್ಥಾನದ ಗೌಡ್ರುಗಳಿಗೂ ಸ ರಚನೆ ದೃಷ್ಟಿಲಿ ತೀರ ಭಿನ್ನ ಆಗಿರ್‍ವ 'ಐನ್‌ಮನೆ'ಗ ಒಳೊ. ಈ ಮನೆಗ ಸ ಗುತ್ತು ಮನೆ, ಸೀಮೆಕಳ ಮನೆಗಂತೇಳಿ ಗೌರವಲಿ ಗುರ್‍ತಿಸಿಕೊಂಡವೆ. ಈ ಮನೆಗ ರಚನೆ ಹಾಂಗೆ ಸಾಂಸ್ಕೃತಿಕ ವೈಶಿಷ್ಟ್ಯಗಳ್‌ಂದ ಸಂಕೀರ್ಣ ಆಗಿದ್ದವೆ. ಐನ್ ಮನೆ ಅಂದರೆ ಕುಲದೈವ, ಮನೆ ದೈವ, ಧರ್ಮದೈವ, ಸತ್ತು ಕುಲೆಗ ಆದ ಹಿರಿಯರ ಸ್ಥಾನಗಳ್‌ಂದ ಕೂಡಿ ಕುಟುಂಬದ ಕರ್ತನ ನಿರ್ದೇಶನಲಿ ಕುಟುಂಬದೊವು ವಾಸಿಸುವ ಮನೆ ಐನ್‌ಮನೆ. ಹೀಂಗೆ ಇರುವ ಮನೆ ಗೌಡರ ಸಾಮಾಜಿಕ ಕಟ್ಟಳೆಗ ಅರಮನೆ–ಗುರುಮನೆಗಳಂದ ನಿರ್ದೇಶಿಸಲ್ಪಟ್ಟದೆ. ಕುಟುಂಬ ಗೌಡ ಸಮುದಾಯದ ಪ್ರಾಥಮಿಕ

ಘಟಕ. ಪಿತೃಪ್ರದಾನ ವ್ಯವಸ್ಥೆನ ಗೌಡ್ರ ಕುಟುಂಬಲಿ ನಡಿವ ಹುಟ್ಟು - ಮದುವೆ-ಸಾವು ಹಿಂಗೆ ಎಲ್ಲವೂ ಊರು ಗೌಡ/ಒತ್ತು ಗೌಡರ್‌ಗಳ್‌ಂದ ನಡಿಯೊಕು. ಆರು ಊರು ಗೌಡ್ರ ಮೇಲ್ವಿಚಾರಣೆಗೆ ಒಬ್ಬ ಮಾಗಣೆ ಗೌಡ, ಒಂಬತ್ತ್ ಮಾಗಣೆ ಗೌಡ್ರ್ ಕೂಡಿ ಒಂದು ಕಟ್ಟೆಮನೆ. ತುಳುನಾಡ್‌ನ ಒಟ್ಟಾರೆ ಗೌಡ್ರ್‌ಗ ಪಡು ಬಲ್ನಾಡ್ ಮೂಡು, ಕೂಜುಗೋಡು- ಕಟ್ಟೆಮನೆಗ. ಗೌಡ ಸಮುದಾಯದ ವಾದ-ವಿವಾದ ಕೋರ್ಟಿಗೆ ಹೋಗುವ ಕ್ರಮ ಇತ್ಲೆ. ಕಟ್ಟೆಮನೆಗಳೇ ತೀರ್ಮಾನ ಕೊಡ್ದು. ಅಲ್ಲಿನೂ ಆಗದಿದ್ದರೆ ಗುರುಮನೆಗೆ ಹೋಕು. ಗುರುಮನೆಲಿನೂ ಇತ್ಯರ್ಥ ಆಗದೇ ಹೋದರೆ ಕೋರ್ಟುಗೆ ಹೋಕು. ಕೋರ್ಟು ಸ ಕಟ್ಟೆಮನೆಯವರ ಕರ್‍ಸಿ ಅವರ ಎದ್ರ್‌ಲಿ ತೀರ್ಮಾನ ಆತಿತ್ತ್ ಗಡ. ಬಲ್ನಾಡ್ ಕಟ್ಟೆಮನೆಯ ಅಂಬೋಡಿ ಯಾನೆ ಪೂವಣಿ ಗೌಡ್ರ್ ಇದಕ್ಕೆ ಸಾಕ್ಷಿಯಾಗಿದ್ದೊಂತ ಅವರ ಮನೆವು ಇಂದ್ ಸ ಹೇಳಿಕಂಡವೆ.

ನಾವ್ಗೆ ಗುರುಮನೆ-ಶೃಂಗೇರಿನೋ ಅಲ್ಲ ಆದಿಚುಂಚನಗಿರಿನೋ ಅಂತ ಚರ್ಚೆ ಉಟ್ಟು. ನನ್ನ ಪ್ರಕಾರ ಆದಿಚುಂಚನಗಿರಿನೇ ಆಕು. ಯಾಕೇಂತೇಳ್ರೆ ನಾವು ಮೂಲತಃ ಶೈವ ಮೂಲದೊವು. ಆದರ್‌ಂದ ಬೈರವಾರಾಧಕರ್. ಕೆಳದಿ ಅರಸರ್ ಹಾಂಗೆ ಕುಕ್ಕೆನ ಚಂದ್ರಮೌಳೇಶ್ವರ ಸ್ಥಾನ ಮೂಲವಾಗಿ ಶೃಂಗೇರಿ ಮಠದ ಶಿಷ್ಯವರ್ಗ ಆಕೆ ಕಾರಣ ಆಗುಟು.

**ಅರೆಭಾಷಿಕರ ವೀರ ಪರಂಪರೆ :** ವೀರ ಪರಂಪರೆನ ದೃಷ್ಟಿಲಿ ಯೇನೆಕಲ್ಲ್‌ನ ಬಚ್ಚನಾಯ್ಕ ಹಾಂಗೆ ಕಂದ್ರಪ್ಪಾಡಿನ ಪುರುಷರ್ ದೈವರೂಪಲಿ ಇದರ ಪ್ರತಿನಿಧಿಕರಣಗ ಆಗೊಳೊ. ಬಚ್ಚನಾಯಕ ಗೌಡ್ರ ಎರಡನೇ ಹಂತದ ಪ್ರಸರಣದ ಸಂಕೇತ. ಆದರೆ ಪುರುಷ ಆ ಪೂರ್ವದ ಪ್ರತೀಕ. ಇವು ಸಮುದಾಯನ ಪ್ರತಿಷ್ಠಾಪಿಸುವಲ್ಲಿ ಪ್ರಾಣಾರ್ಪಣೆ ಮಾಡಿ ಸತ್ತ ಬಳಿಕ ಅರೆಭಾಷಿಕರ್‌ಂದ ಆರಾಧನೆಗೆ ಬಂದ್ ದೈವನ ನೆಲೆಗೇರ್ದ ವೀರ ಪುರುಷರ್.

ಅರೆಭಾಷಿಕ ಗೌಡ್ರಿಗೆ ರಾಜಕೀಯ ಹಾಂಗೆ ಸಾಂಸ್ಕೃತಿಕ ನೆಲೆಲಿನೂ ಸ್ಥಾನಮಾನಗ ಇದ್ದೊ. ಇವ್ಕೆ ಊರು-ಗ್ರಾಮಗಳ ಅಧಿಕಾರ ಇತ್ತ್. ದೈವ ದೇವ್ರ ಸ್ಥಾನಗಳ ಮೊಕ್ತೇಸರಿಕೆನೂ ಇತ್ತ್. ಗೌಡ್ರ ನಾಲ್ಕಂಕದ ಐನ್ ಮನೆಗಳ ಹಿನ್ನೆಲೆ ಇಲ್ಲಿಗೆ ಪೂರಕವಾಗಿಟ್ಟು. ಇವು ಅರಮನೆ- ಗುರುಮನೆನ ರಾಜಕೀಯ ಹಂಗೆ ಮತ ಸಂಬಂಧಿ ಆಡಳಿತದ ಸಂಗತಿಗ ಸ ಸ್ಥಳೀಯ ಮೂಲಕ್ಕೆ ತಾಕೆ ಸಹಾಯ ಆಗಿದ್ದೊ. ಐನ್/ತರವಾಡ್/ಕಟ್ಟೆಮನೆಗ ಈ ದೃಷ್ಟಿಲಿ ಸಹಾಯಕ ಕಾರ್ಯ ನಿರ್ವಹಿಸುತ್ತಿದ್ದೊ. ಅರಸೊತ್ತಿಗೆ ನಾಶ ಆಗಿ ಬ್ರಿಟೀಷ್ ಪಾಳೆಗಾರಿಕೆ ಇರ್ಕಾಕನ ಸ ಈ ಗುತ್ತು ಮಟ್ಟದ ಐನ್ ಮನೆಗ ಮುನ್ನಿ, ಊರ ಪಟೇಲತ್ತಿಗೆ ಮಾಡ್ತಿದ್ದೊ. ಪಂಚ್ಯಾತ್ ವ್ಯವಸ್ಥೆ ಬಂದ 1960ರ ನಂತರ ಇವರ ಈ ಪಟೇಲ್‌ತನ ಕಳಚಿಕೊಂಡಿತ್ತ್ ಆದರ್ ಇಂದ್‌ನು ಈ ಸರ್‌ನೇಮ್‌ನ ಬಳ್ಸಿಕೊಂಡ್ ಸ್ಮೃತಿಯಾಗಿ ಉಳ್ಸಿಕೊಂಡೋಳೋ. 1837 ಬ್ರಿಟೀಷರ ವಿರುದ್ಧದ ಸ್ವಾತಂತ್ರ್ಯ ಹೋರಾಟನ ವ್ಯವಸ್ಥೆ ಮಾಡುವಲ್ಲಿ ಐನ್‌ಮನೆನವು ನಿರ್ವಹಿಸಿದ ಪಾತ್ರ ಮಹತ್ತರದಾಗಿಟ್ಟ್, ಅರೆಭಾಷಿಕ ಸಮುದಾಯ ಅಭಿಮಾನಂದ ತಲೆ ಎತ್ತಿ ನಡೆಮಂಗೆ ಮಾಡಿದ ಚಾರಿತ್ರಿಕ ಸಂಗತಿ: 1837ರ ಮಾರ್ಚ್ 30ರಂದ್ ಮುಹೂರ್ತಗೊಂಡ ಅಮರ ಸುಳ್ಯದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾರಣರಾದವರಲ್ಲಿ ಕೆದಂಬಾಡಿ ರಾಮಯ್ಯ

ಗೌಡ್ರು ಪ್ರಧಾನರ್. ಇವು ಕೆದಂಬಾಡಿ ಐನ್‌ಮನೆಯ ಪ್ರಭಾವಿ ನಾಯಕ ಆಗಿದ್ದೊ. ಅಪರಂಪರ ಹಾಂಗೆ ಕಲ್ಯಾಣ ಸ್ವಾಮಿಯ ಹೆಸರ್ಲಿ ನಡ್ದ ಎರ್ಡ್ ವಿಫಲ ಯತ್ನಗ ಸ್ವಾತಂತ್ರ್ಯ ಹೋರಾಟನ ಜೀವಂತವಾಗಿಸಿ ಮೇಲ್ ಕೊಡ್ಗ್, ಕೆಳ ಕೊಡ್ಗ್ ಸುಳ್ಯಲಿ ಹೋರಾಟ ನಡ್ಸುವಲ್ಲಿ ಉಬರಡ್ಕದ ಕೆದಂಬಾಡಿನ ರಾಮಯ್ಯ ಗೌಡ ಪ್ರಧಾನ ಪಾತ್ರ ವಹಿಸಿದ್ದೊ. ಮೊದಲ ಪ್ರಯತ್ನಲಿ ಅಪರಂಪರನೆಂಬ ಜಂಗಮನಾಗಿ ಕಾಣ್ಸಿಕೊಂಡ ವೀರಪ್ಪ ಬ್ರಿಟಿಷರ ವಿರುದ್ಧದ ಜನ ಬೆಂಬಲಕ್ಕಾಗಿ ಕೂಜುಗೋಡಿನ ಅಪ್ಪಯ್ಯ ಗೌಡ್ರನ ಭೇಟಿ ಮಾಡ್ದೆ. ಈ ಪ್ರಯತ್ನಲಿ ಅಪರಂಪರ ಬ್ರಿಟಿಷರ ಸೆರೆಯಾದೆ. ಎರಡನೇ ಪ್ರಯತ್ನಲಿ ಕಲ್ಯಾಣ ಸ್ವಾಮಿನೂ ಬೈತೂರಿನಲ್ಲಿ ಸೆರೆಯಾದೆ. ಆದರೂ ಪ್ರಯತ್ನ ಬಿಡದೆ ಕೊಡ್ಗ್‌ಲಿ ಹುಲಿಕಡ್ದ ನಂಜಯ್ಯ ಮತ್ತೆ ಸುಳ್ಯಲಿ ರಾಮಯ್ಯ ಗೌಡ್ರು ಬಂಡಾಯನ ಜೀವಂತವಾಗಿ ಇರ್ಸುವೆ

ಈ ಹೋರಾಟ ಸಂಘಟಿಸುವಲ್ಲಿ ಜಾತಿ, ರಾಜಕೀಯ, ಅಧಿಕಾರ ಹಾಂಗೆ ಕೌಟುಂಬಿಕ ಬಾಂಧವ್ಯಗ ಕಾರಣ ಆಗಿದ್ದೊ. ಕೂಜುಗೋಡಿನ ಕುಂಭಗೌಡ ಕೊಡ್ಗ್‌ಲಿ ನೆಲೆ ಆಗಿ ಕೊಡಗರಸರೊಟ್ಟಿಗೆ ರಾಜಕೀಯ ನೆಲೆಲಿ ಸಂಬಂಧ ಇತ್ತ್. ಮತಮೂಲವಾಗಿನೂ ಕೊಡಗರಸರ್ ಶೈವ ಮೂಲದವರಾಗಿದ್ದ್, ಕೂಜುಗೋಡು ಮತ್ತು ಕೆದಂಬಾಡಿ ಮನೆಯವು ಮೂಲಲಿ ಲಿಂಗಾಯಿತರಾಗಿದ್ದೊ. ಈ ಹಿನ್ನೆಲೆ ಅಲ್ಲದೆ ಅಪರಂಪರ ಕೂಜುಗೋಡಿಲಿ ಕಂಡ್ ಬಾಕೆ ಇನ್ನೊಂದು ಕಾರಣಂತೇಳ್ರೆ ಕೂಜುಗೋಡಿನ ಕಟ್ಟೆಮನೆ ಇಡೀ ಅರೆಭಾಷಿಕ ಮಾಗಣೆ, ಊರು ಗೌಡರ ನಿಯಂತ್ರಕ ಶಕ್ತಿಯಾಗಿದ್ದದ್ದ್ ಆಗಿತ್ತ್. ಈ ಕಾಲಲಿ ಕುಕ್ಕೆ ಸುಬ್ರಾಯ ದೇಗುಲದ ಮೋಕ್ತೇಸರಿಗೆ ಈ ಗೌಡರಿಗೆ ಇತ್ತ್. ಜೊತೆಗೆ ಹತ್ತು ಕುಟುಂಬದ ಗೌಡರ ಒಂದೆಡೆ ಸೇರ್ಸುವ ಶಕ್ತಿ ಕೂಜುಗೋಡಿನವಿಕೆ ಇತ್ತ್. ಗೌಡ ಸಮುದಾಯನ ಆಚಾರ ವಿಚಾರಗ ನಡ್ಸುವ ಸನದು ಗುರುಮನೆಂದ ಇವ್ಕೆ ಇತ್ತ್. ಊರ ಪಟೇಲತನನೂ ಇತ್ತ್. ಗುರುಮನೆಂದ ಕೊಡ ಮಾಡ್ದ ಅಧಿಕಾರ ಮುದ್ರೆನ ಕೆಂಪು ಪಟ್ಟಿ ಹೆಗಲಲ್ಲಿ ಧರಿಸಿ ತಾಮ್ರದ ಸನದು ಬಿಲ್ಲೆನ ಪೆಟ್ಟಿಗೆಲಿರಿಸಿ 'ಗುರುಪಣ'ನ ಸಂಗ್ರಹಿಸುವ 8 ಮಾಗಣೆನ ಗೌಡರಲ್ಲಿಗೆ ಹೋಗುವ ಪದ್ಧತಿ ಇದ್ದ ಇವ್ಕೆ ಪೂರ್ಣ ಪ್ರಮಾಣಲಿ ಗೌಡ ಸಮುದಾಯನ ನಿಯಂತ್ರಿಸುವ ಸಾಮರ್ಥ್ಯ ಇತ್ತ್. ಈ ಎಲ್ಲ ಹಿನ್ನೆಲೆಲಿ ಬ್ರಿಟಿಷರ ವಿರುದ್ಧದ ಹೋರಾಟಲಿ ಲಿಂಗಾಯಿತ ಮೂಲದ ಕಬರ್ ಬಳಿಯ ಕೆದಂಬಾಡಿ ರಾಮಯ್ಯ ಗೌಡನ ನೇತೃತ್ವಲಿ ಕುಡೆಕಲ್ ಪುಟ್ಟ, ಕುಂಚಡ್ಕ ತಿಮ್ಮ, ದೇರಾಜೆಯ ಬಚ್ಚ, ದಾಖಲಾಗದೇ ಇರುವ ಪಂಜ ಸೀಮೆನ ಕೂಜುಗೋಡು ಅಪ್ಪಯ್ಯರ ನಿಷ್ಠಾವಂತ ಜೊತೆಗಾರ ಕಲ್ಮಡ್ಕ ಅಮ್ಮೆಯ ಮಲ್ಲಪ್ಪ, ಕಳಿಗೆ ಅಣ್ಣು ಗೌಡ, ನಡ್ತೊಟ್ಟು ತಿಮ್ಮಗೌಡ, ಮಣಿಯಾನ ಗೌಡ, ಕಳಿಗೆಯ ಕೊಡ್ಯಂತರಾಮ ಇವೆಲ್ಲವೂ ಐನ್ ಮನೆಯೊವಾಗಿದ್ದ್, ಇವರ ಕೈಕೆಳಗೆ ಊರಿನ ಸಮಸ್ತರ್ ಸೇರ್ದು ಸಾಧ್ಯ ಆತ್. ಕೂಜುಗೋಡು ಕಟ್ಟೆಮನವ್ಕೆ ಇದ್ದ ನಿಯಂತ್ರಣದಂಗೆ ಪಡು ಬಲ್ನಾಡ್ ಕಟ್ಟೆ ಮನೆಯವ್ಕೆ ಪುತ್ತೂರ್, ಬೆಳ್ತಂಗಡಿ ಭಾಗದ ಗೌಡರ ಮೇಲೆ ನಿಯಂತ್ರಣ ಇತ್ತ್. ಇದರ ಒಟ್ಟಾರೆ ಫಲವಾಗಿ 1837ರ ಅಮರ ಸುಳ್ಯದ ಸ್ವಾತಂತ್ರ್ಯ ಹೋರಾಟ ನಡಿಯಕ್ಕೆ ಸಾಧ್ಯ ಆತ್. ಸೋತರೂ ಅಭಿಮಾನದ ಸಂಕೇತ ಆಗಿ ಉಳ್ದ್‌ಟು.

ಚರಿತ್ರೆನ ಕಣ್ಣ್‌ಲಿ ಇಷ್ಟಾದರೆ; ಸ್ವಾತಂತ್ರ್ಯ ನಂತರ ಅರೆಭಾಷಿಕ ಸಮುದಾಯನ ಅನೇಕ ಜನ ರಾಜಕೀಯ ಶಕ್ತಿಗ ಆಗಿ, ಶಿಕ್ಷಣ ಕ್ಷೇತ್ರಲಿ, ಸಾಹಿತ್ಯ ಕ್ಷೇತ್ರಲಿ ಹೆಸರ್ ಪಡ್ದವರ ದೊಡ್ಡ ಪಟ್ಟಿ ನಮ್ಮೆದುರು ಉಟ್ಟು. ಗೌಡ್ರುಂತ ಹೇಳಿಕಂಬಕ್ಕೆ ನಾಚಿಕೆ ಪಟ್ಟ್ ಕೊಂಬ ಸಂದರ್ಭಲಿ ಅಕ್ಷರ ದಾನಿ ಕುರುಂಜಿಯವು ಮಾನ ಕೊಟ್ಟ್ ತಲೆ ಎತ್ತಿ ನಡೆವಂಗೆ ಮಾಡ್ದ. ಕೂಜುಗೋಡು ಕಟ್ಟೆಮನೆನ ಕುಶಾಲಪ್ಪ ಗೌಡ, ಸುಬ್ರಹ್ಮಣ್ಯ ಗೌಡರ್, ಹಾಂಗೆ ಡಿ.ವಿ. ಸದಾನಂದ ಗೌಡ ಇವೆಲ್ಲವೂ ರಾಜಕೀಯ ಶಕ್ತಿಯಾಗಿ ಬೆಳ್ದ್ ಗಮನ ಸೆಳೆದ್ದೊಳೊ. ಟಿ.ಜಿ ಮುಡೂರು, ಕೋಡಿ ಕುಶಾಲಪ್ಪ ಗೌಡ, ಕುತ್ಯಾಳ ನಾಗಪ್ಪ, ಪುರುಷೋತ್ತಮ ಬಿಳಿಮಲೆಯಂತ ನೂರಾರು ಜನ ಹಿರಿಯರೊಟ್ಟಿಗೆ ಅನೇಕ ಯುವಕರ್ ಇಂದು ಸಾಹಿತ್ಯ ಮತ್ತೆ ಕಲಾಕ್ಷೇತ್ರಲಿ ಗುರುತಿಸಿಕೊಂಡೊಳೊ.

ಗೌಡರ ಮೂಲ ಆರಾಧನಾ ಪರಂಪರೆನ ಸ್ಥೂಲವಾಗಿ ಪರಿಭಾವಿಸಿ ಹೇಳುದಾದರೆ, ಮೂಲತಃ ಇವು ಶೈವಮೂಲ ನಾಥ ಪಂಥದವು, ಬೈರವಾರದಕರ್ ಜೊತೆಗೆ ಹೊಸಕೋಟೆ ಕೆಂಚಮ್ಮನ ಭಕ್ತರ್. ಪಳಿಯುಳಿಕೆ ಎಂಬಂತೆ ಪಣೆಮಜಲ್, ಏಣಡ್ಕ, ಕೂಜುಗೋಡ್‌ಗಳ್ಲಿ ಇಂದ್ ಕೆಂಚಮ್ಮನ ಆರಾಧನೆ ನಡಿತ್ತಾ ಉಟ್ಟು. ವಿವಾಹ ಸಂದರ್ಭಲಿ ಇಂದ್ ಸ ಈ ಕೆಂಚಮ್ಮನಿಗೆ ಹರಕೆ ಒಪ್ಪಿಸುವ ಕ್ರಮ ಉಟ್ಟು. ವಲಸಿಗ ಗೌಡರ್ ಮೂಲತಃ ದೈವಾರಾಧಕರಲ್ಲ, ಆದರೂ ಸ ಭೂ ಆಸ್ತಿ ಹಸ್ತಾಂತರ ಕಾರಣ ಆಗಿ ಅವು ಇಂದ್ ಹಲ ದೈವಗಳ, ಪ್ರಧಾನ ಆಗಿ ಧರ್ಮದೈವನ ನೆಲೆಲಿ ರುದ್ರಾಂಡಿನ, ನಮ್ಮ ನಾಯಕರ್ ಎಂಬ ನೆಲೆಲಿ ಬಚ್ಚನಾಯಕ, ಪುರುಷ, ಶಿರಾಡಿ ದೈವನ ಆರಾಧಿಸುವೆ. ಅರಸು ದೈವಗಳ ಆರಾಧನೆಲಿ ಇವು ಪ್ರಧಾನ ಪಾತ್ರ ವಹಿಸುವೆ.

ಒಟ್ಟಾರೆ ಆಗಿ ಒಕ್ಕಲಿಗ ಅರೆಭಾಷಿಕ ಮೂಲದ ಗೌಡರು ಕ್ಷತ್ರೀಯ ವೀರ ಪರಂಪರೆಯವು. ಜೀವನ ನಿರ್ವಹಣೆನ ಕಾರಣಕ್ಕಾಗಿ ತುಳುನಾಡಿಗೆ ಇಳ್ದ ಅವು ತಮ್ಮ ಭಾಷೆನ ಉಳಿಸಿಕಂಡ್ ಇಲ್ಲಿನ ಸಂಸ್ಕೃತಿನ ಅನಿವಾರ್ಯ ಆಗಿ ಒಪ್ಪಿಕೊಂಡೊಳೊ. ಪರಿವರ್ತನೆ-ಪರಿಷ್ಕಾರಕ್ಕೆ ಅನುವು ಮಾಡಿಕೊಂಡೊಳೊ. ಬಲ್ಲಾಳ ಬೀಡುಗಳಲಿ ಶ್ರಮಿಕರಾಗಿ ದುಡ್ದೊಳೊ. ಸಹಜತೆ-ಸಂಘರ್ಷಗಳಲಿ ಅಭಿಮಾನದ ಬದ್‌ಕ್‌ನ ಕಟ್ಟಿಕಂಡೊಳೊ. ಅರೆಭಾಷೆ ದ್ರಾವಿಡ ಭಾಷೆನ ಒಂದು ಕವಲ್. ನೀಲಗಿರಿ ಬೆಟ್ಟ ಸಾಲ್‌ನವು ಮಾತಾಡುವ ಬಡಗ ಭಾಷೆಗೆ ತೀರ ಸಮೀಪವರ್ತಿ ಬಾಷೆಂತ ಭಾಷಾ ತಜ್ಞರು ಕಂಡ್ ಕೊಂಡಳೊ. ಭಾಷೆ ಕನ್ನಡಕ್ಕೆ ತೀರ ಸಮೀಪ ಆಗಿ ಅದರ ನಿಷ್ಪನ್ನ ಅನ್ನುವ ಹಾಂಗೆ ಉಟ್ಟು. ಹಳಗನ್ನಡಲಿ ಸಾಮಾನ್ಯ ಆಗಿರುವ 'ಗಡ' ಇತ್ಯಾದಿ ಪದಗ ಸಮಾನ ಎಂಬಂತೆ ಬಳಕೆಲಿ ಒಳೊ. ಗೌಡ್ರು ಹಲ ಬದಲಾವಣೆಗೆ ಒಳಗಾದರೂ, ಭಾಷೆನ ವಿಷಯಲಿ ನಿಷ್ಠರಾಗೊಳೊ. ಅಲ್ಲದೆ ಆ ಭಾಷೆನ ಬೇರೆಯವ್ಕೆ ಹಂಚಿ ಕೊಟ್ಟೊಳೊ. ಈ ಕಾರಣ್ಕಕಾಗಿ ಅವು ಹೆಮ್ಮೆ ಪಡೊಕು. ಇನ್ನಷ್ಟು ಅದ್ ಬೇರೆಯವರ ಒಳಗೊಳ್ಳುವಂಗೆ ಮಾಡೊಕು. ಆ ಬಗೆನ ಮುಕ್ತತೆನ ಅವು ಹೊಂದೊಕು.

ಚಿಂತನೆ

# ಯಾರ್ದ್ ಪಾಪ ಯಾರ್ದ್ ಪುಣ್ಯ

ಪೂಜಾರಿರ ಜಿ. ಮಾದಪ್ಪ

ನಮ್ಮ ಭಗವದ್ಗೀತೆ, ಇದನ್ನ ಆಧಾರವಾಗಿಟ್ಕಂಡ್ ನಾವು ಸಾಧ್ಯಾದಷ್ಟ್ ಮಟ್ಟಿಗಾದರ್ ಧರ್ಮ, ನೀತಿ, ನಡತೆಲಿ ಜೀವನ ಸಾಗಿಸಿಕಂಡ್ ಹೋದರೆ ಅದೇ ಪುಣ್ಯಂತೇಳಿ ನಮಗೆಲ್ಲ ತಿಳಿದಂತ ವಿಷಯ. ಆದರೆ ಈ ಪಾಪತೇಳ್ದನ್ನ ಮಾಡವು. ಯಾರ್‌ಸ ಇರಿಕಿಲೆ. ಈಗ ನೀವು ಗ್ಯಾನ ಮಾಡುವರಿ ನಾನು ಅಥವಾ ನನ್ನ ಕುಟುಂಬವು ಸಹ ಯಾವುದೇ ಪಾಪಗಳನ್ನ ಸಹ ಮಾಡ್‌ತಿಲ್ಲೆ. ನಾವು ಹಸಿವಾಗಿ ಬಂದವ್‌ಕೆ ಒಂದಿಡಿ ಅನ್ನ ಹಾಕ್‌ತೊಳೊ, ಕುಡಿಯಕಾಗಿ ಅಂದರೆ ಬಾಯಾರಿ ಬಂದವ್‌ಕೆ ಒಂದ್ ಲೋಟ ನೀರ್ ಕೊಡುವಂತ ಧರ್ಮದ ಕೆಲಸ ಕಾರ್ಯಗಳ್‌ನ ನಮ್ಮ ಮನೇಲಿ ಅಂದ್‌ಂದ ಇಂದ್ ಮುಟ್ಟ ನಡಿಸಿಕಂಡ್ ಬರ್‌ತೊಳೊ. ಅದ್‌ರಂದ ನಾವು ದೇವರ ಮಟ್ಟಕ್ಕೆ ತಲ್ಪುದು ಖಂಡಿತ ತಾನೇ. ಅವರ ತಿಳುವಳಿಕೆ ಮಟ್ಟಕ್ಕೆ ಅದ್ ಒಂದ್ ತರದ ಭ್ರಮೆ ತೇಳಿ ಈಗ ನನ್ನ ಮನಸಿಗೆ ಆಗ್‌ತುಟ್ಟು, ಎಲ್ಲಾ ಪಾಪಗಳಿಗಿಂತ ದೊಡ್ಡ ಪಾಪತೇಳಿರೆ ಈ ಲಂಚತೇಳ್ದ್. ಈ ಶಬ್ದನ ಕೇಳಿಕಾಕನ ನಮ್ಮ ಮುಂದೆನ ಬಾಳ್‌ನ ಅದರೊಟ್ಟಿಗೆ ಈ ಪ್ರಪಂಚನ ನಾವೇ ಕೈಯಾರ ಸುಟ್‌ಹಾಕಿದಂಗೆ. ಆದ್ರೆ ಯಾವುದನ್ನ ಮಾಡಿಕಾಗದ್ ಅದರ್ನ ಮಾಡಿರೆ ಅದೆಷ್ಟ್ ನೂರಾರ್ ಸಾವಿರಾರ್ ಅಥವಾ ಲಕ್ಷದಷ್ಟ್ ಜೀವಿಗಳಿಗೆ ತೊಂದರೆ ಆದೆತೇಳ್ದ್ ಗೊತ್ತಿದ್ದರೂ ಸಹ ನಾವು ಪುನಃ ಪುನಃ ಅದೇ ತಪ್ಪುನ ಮಾಡ್‌ತೊಳೊ.

ಭಗವದ್‌ಗೀತೆ ಪ್ರಕಾರ ಶ್ರೀ ಕೃಷ್ಣ ಪರಮಾತ್ಮ ಹೇಳ್ದೆ, ಈ ಪ್ರಕೃತಿಯ ಪ್ರತಿಯೊಂದರ ಮೂಲ ಬೀಜನೇ ನಾನ್, ಈ ಭೂಮಿಯೇ ಹೆಣ್ಣಿನ ಮೂಲ. ಅದರ್‌ಂದ ಪ್ರತಿಯೊಂದರಲ್ಲಿ ನನ್ ಒಳೆ. ಹಂಗೆನೆ ಪ್ರತಿಯೊಂದ್ ಕ್ಷಣಲಿ ಆಗ್‌ತಿರ್‌ವಂತ ಪಾಪ ಮತ್ತೆ ಪುಣ್ಯದ ಕೆಲಸದ ತಿಳಿವಳಿಕೆ ನಂಗೆ ಮುಟ್ಸ್‌ತುಟ್ಟ್, ಆದ್ರೆ ಈ ಎಲ್ಲಾ ಜೀವಿಗಳಿಗಿಂತ ಮನುಷ್ಯ ಜೀವಿ ಅತೀ ಉನ್ನತ ಮಟ್ಟದ ಬುದ್ದಿವಂತಿಕೆಗಳಿಂದ ಕೂಡ್‌ದಂತ ಪಾಪ ಪುಣ್ಯಗಳ ಬಗ್ಗೆ ತಿಳ್ಕಂಡಂತ ಜೀವಿ. ಈ ಮನುಷ್ಯ ಜೀವಿ ಹುಟ್ಟಿದ ನಂತರ ಸ್ವಲ್ಪ ದೊಡ್ಡವನಾಗಿ ಬೆಳಿಯಕಾಕನ ಅವಂಗೆ ಅಥವಾ ಅವಳಿಗೆ ಗೊತ್ತಾದೆ. ನಾನು ಹುಟ್ಟಿ ಬಂದೊಳೊ ಅಂದರೆ ದೇವರ ನಿಯಮದ ಪ್ರಕಾರ ಹುಟ್ಟಿದವು ಎಂದಾದರೊಂದು ದಿನ ಸತ್ತೇಸತ್ತವೆತೇಳ್ದು. ಇಷ್ಟ್ ಗೊತ್ತಿದ್ದರೂ ಸಹ ನಾವ್ ನಿತ್ಯ ಜೀವನಲಿ ಎಲ್ಲಾ ತಪ್ಪುಗಳ್‌ನ ಮಾಡ್‌ತೊಳೊತೇಳ್ದನ್ನ ನೀವೊಮ್ಮೆ ನಿಧಾನವಾಗಿ ಗ್ಯಾನ ಮಾಡಿ. ಆದರೆ ನಮಗೆಲ್ಲಾ ಧರ್ಮ ಯಾವ್ದ್ ಅಧರ್ಮ ಯಾವ್ದ್ ಗೊತ್ತಿದ್ದರೂ ಸಹ, ಅದೇ ಅಧರ್ಮದ ತಪ್ಪುಗಳ್ನ ಮಾಡಿಕೊಂಡ್ ನಮಗೆ ಬೇಕಾದ ಪಾಪದ ಗುಂಡಿಗಳ್ನ ನಾವೇ ಮಾಡಿಕೊಳ್ತೊಳೊ. ಇದರ್ಲಿ ವಿಧಿ ನಿಯಮದ ಕೈವಾಡ ಸಹ ಉಟ್ಟೇ ಉಟ್ಟು. ಯಾಕೆತೇಳ್ರೆ ಎಲ್ಲವೂ ಧರ್ಮದ ಪ್ರಕಾರ ನಡ್ದರೆ ಅವೆಲ್ಲವೂ ದೇವರ ಮಟ್ಟಕ್ಕೆನೇ ಬಂದರೆ ಈಗಿರುವ ದೇವರು ಯಾವ ಮಟ್ಟದ ಸ್ಥಾನಲಿ ಇರುಕುತೇಳಿ. ಅದಕ್ಕಾಗಿ ಈ ಮನುಷ್ಯ ಶರೀರದ ಒಳಗಡೆ ಜೀವಾತ್ಮ ಮತ್ತೆ ಪರಮಾತ್ಮ ಇವರಿಬ್ಬರಿನ ಇರಿಸಿ ಈ ಪ್ರಪಂಚಕ್ಕೆ ಅಂದರೆ ಭೂಮಿಗೆ ಕಳಿಸಿಕೊಟ್ಟ್ ಈ ಜೀವಿಗಳಿಂದಲೇ ತಪ್ಪು ಕೆಲಸಕ್ಕೆ ಆಸೆ ಪಡುವಂತ ಬುದ್ದಿಗೊಳಗಾಗುವಂಗೆ ಮಾಡುತುಟ್ಟ್, ಅಂದರೆ ಇದ್ ದೇವರ್ಲಿ ಸಹ ಇರುವಂತ ಒಂದು ಮುಖ್ಯವಾದ ಆಸೆ. ಆದರೆ ಸೃಷ್ಟಿಕರ್ತನ ಆಸೆಯೇ ಹಂಗೆ ಇರ್ಕಾಕನ ಇದನ್ನ ಮೀರಿ ನಡೆಯಕೆ ತಾನೆ ಯಾರಿಗೆ ಸಾಧ್ಯ. ಅದೇ ರೀತಿಲಿ ಈ ಪ್ರಪಂಚಲಿ ಇರುವಂತ ಅವನ ಇಚ್ಚೆಯಂತೆ ಹುಟ್ಟಿದ ಈ ಮನುಷ್ಯ ಜೀವಿಗ ಸಹ ಅವು ಬೆಳ್ದ್ ಬಂದ ದಾರಿನ ಮುಂದೆ ಹಿಂಗೆ ಅವು ಸರಿಪಡಿಸಿಕಂಡರೆ  ನಾವು ಸಹ ದೇವರ ಮಟ್ಟಕ್ಕೆ ತಲ್ಪುವೆತೇಳ್ವ ಆಸೆ.

ಆಸೆ ಇಲ್ಲದಿದ್ರೆ ಅಭಿವೃದ್ಧಿ ಆದುಲೆ ನಿಜ. ಆದರೆ ಅತಿಯಾಸೆ ಅವರ ನಿರ್ಮೂಲಕ್ಕೆ ಕಾರಣ. ಇದ್ರಿಂದಾಗಿ ನಾವು ಹುಟ್ಟಿದೇ ಈ ಲಂಚಾವತಾರ ಮನುಷ್ಯನ ಶರೀರಂದ. ನಮ್ಮ ಒಳಗಿರುವಂತ ಆತ್ಮ ತನ್ನ ಮುಂದಿನ ಜೀವನಕ್ಕೆ ಬೇಕಾದ ಅನುಕೂಲತೆಗೆ ಬೇಕಾಗಿ ತಪ್ಪು ದಾರಿಗೆ ಎಳಿಯುತ್ತಿದ್ದವೆ. ಹಂಗೆನೆ ಜೀವಿಗಳ ಒಳಗಿರುವ ಪರಮಾತ್ಮ ಆ ಭಗವಂತನ ಹತ್ತಿರ ಸೇರಿಕಾಗಿ ಒಳ್ಳೊಳ್ಳೆ ಉತ್ತಮವಾದ ಕೆಲಸ ಮಾಡಿಸಿದೆ. ಅದೇ ರೀತಿಲಿ ನಮ್ಮ ಈ ಭೂಮಿಲಿರುವಂತಹ ಪ್ರತಿಯೊಂದು ಮನುಷ್ಯ ಜೀವಿಗ ಒಂದಲ್ಲ ಒಂದು ರೀತಿಯ ಲಂಚಲಿ ಜೀವನ ಸಾಗಿಸಿಕಂಡ್ ಮಾಡಬಾರದ ಪಾಪ ಮಾಡಿಕಂಡ್

ಮುಂದೆ ನರಕತೇಳ್ವ ಜಾಗಕ್ಕೆ ದಾರಿ ಮಾಡ್ತೊಳೊ. ಅದರ್‌ಂದ ಒಬ್ಬ ವ್ಯಕ್ತಿ ಗಂಡ್ ಅಥವಾ ಹೆಣ್ಣ ಯಾವುದೇ ದುರಾಸೆ ಇಟ್ಕಂಡ್, ಆ ದುರಾಸೆಗಾಗಿ ಎರಡನೇ ವ್ಯಕ್ತಿಗೆ ತೊಂದರೆ ಕೊಡ್‌ದನ್ನ ಸಹ ಒಂದು ತರದ ಲಂಚತೇಳಕಷ್ಟೆ. ಕೇವಲ ಕಛೇರಿಯಲ್ಲಾಗಲೀ, ಯಾವುದೇ ವ್ಯವಹಾರಗಳಲ್ಲಾಗಲೀ ಇನ್ನೊಬ್ಬರ ಮನಸಿಗೆ ಬ್ಯಾನೆ ಮಾಡಿ ತನ್ನ ಜೀವನ ಸಾಗಿಸಿಕಂಡ್ ನಡಿಯುವಂತಹ ದಾರಿಯೆ ಅತೀ ಪಾಪದ ದಾರಿ. ಇದನ್ನ ಬದಿಗೊತ್ತಿ ತನ್ನ ಜೀವನಲಿ ಕಾಂಬಂತ ದುರಾಸೆಗಳ್ನ ಬುಟ್ಟ್ ಸತ್ಯ ಧರ್ಮಲಿ ಸಾಧ್ಯವಾದಷ್ಟ್ ಮಟ್ಟಿಗೆ ನಡ್‌ಕಂಡ್ ಹೋದರೆ ಅದೇ ಪುಣ್ಯ. ಶ್ರೀ ಕೃಷ್ಣ ಪರಮಾತ್ಮ ಅರ್ಜುನಂಗೆ ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ ತನ್ನ ವಿಶ್ವರೂಪ ತೋರಿಸಿ ಹೇಳ್ದೆ, ನೀನ್ ನಿನ್ನ ಕರ್ತವ್ಯ ಮಾಡ್, ಇಲ್ಲಿ ನಿಂಗೆ ನಿನ್ನವುತೇಳ್ವ ಯಾರು ಇಲ್ಲೆ. ಎಲ್ಲಾವು ನನ್ನವೆ. ಸತ್ಯ ಧರ್ಮವೇ ಇಲ್ಲಿ ಮುಖ್ಯ. ಶಿಷ್ಟರ ಪರಿಪಾಲನೆ ಆಕು, ದುಷ್ಟರ ಸಂಹಾರ ಆಗೇ ಆಕು. ಇದೇ ಅತೀ ಪುಣ್ಯದ ಕೆಲಸ. ಯಾವ ವೈಭವದ ಆಸೆ ನಿಂಗೆ ಬೇಡ. ನೀನ್ ನಿಯಮಿತ ಮಾತ್ರ. ಅದರ್‌ಂದ ನಾವೆಲ್ಲಾ ಸಾಧ್ಯವಾದಷ್ಟ್ ಮಟ್ಟಿಗಾದರೂ ಪುಣ್ಯದ ಕೆಲಸ ಮಾಡೋಣು. ಇನ್ನೊಬ್ಬರ ಮಾತಿಗೆ ಬೆರಗಾಗಿ ದುರಾಸೆಯಿಂದ ತಪ್ಪು ದಾರಿ ಹಿಡಿಯದ್ ಬೇಡ. ಯಾಕೆ ತೇಳ್ರೆ, ಯುದ್ಧಲಿ ಪಾಂಡವ ಗೆದ್ದೇ ಗೆದ್ದವೆ. ಮತ್ತೆ ನಾವೇ (ಪಾಂಡವರೇ) ರಾಜ್ಯಭಾರ ಮಾಡುವೆತೇಳ್ವ ದುರಾಸೆ ಅವನಲ್ಲಿ (ಅರ್ಜುನ)ಇತ್.

ಪಾಪತೇಳಿರೆ,

ಆನೆ ಕೊಂದರೂ ಪಾಪ, ಅಳಿಲ ಕೊಂದರೂ ಪಾಪ..

ಇಲಿಯ ಕೊಂದರೂ ಪಾಪ, ಇರುವೆ ಕೊಂದರೂ ಪಾಪ...

ಈ ಪಾಪ ತೀರಿಸಕಾಗಿ ಕೊಲೆಗಾರ ಮುಂದೆ ಆನೆ, ಅಳಿಲಿ, ಇಲಿ, ಇರುವೆಯಾಗಿ ಹುಟ್ಟಿ ಮತ್ತೆ ಅವರಿಂದಲೆ ಸಾಯೋಕು. ಹಿಂಗಿರ್‌ಕಾಕನ ಪಾಪತೇಳ್ದನ್ನ ಯಾವ ತರದ ಲಂಚಂದ ಸಹ ತೀರಿಸಕಾದುಲೆ. ತಿಳಿಯದೆ ತಪ್ಪು ಮಾಡಿರೆ ಕ್ಷಮೆ ಉಟ್ಟ್, ತಿಳ್ದ್ ತಪ್ಪು ಮಾಡಿರೆ ಅದರ್‌ಂತ ಪಾಪ ಬ್ಯಾರೆ ಇಲ್ಲೆ. ಇದಕ್ಕೆ ಪರಿಹಾರತೇಳಿರೆ ವೇದ ಶಾಸ್ತ್ರ, ಪುರಾಣಗಳಲ್ಲಿ ಹೇಳುವಂತ ಪೂಜೆ ಪುರಸ್ಕಾರಗಳಿಂದ ಪರಿಹಾರ ಪಡ್‌ಕಣಕ್ ಅದಕ್ಕಾಗಿ ಪ್ರತಿಯೊಂದ್ ಕುಟುಂಬಲಿ ಅವರದ್ದೇ ಆದ ರೀತಿ ನಿಯಮಗಳಲ್ಲಿ ಪೂಜೆ ಪುರಸ್ಕಾರಗಳನ್ನ ಮಾಡಿ ಪಾಪನ ತೀರಿಸಿಕಂಡ್ ಪುಣ್ಯದ ದಾರಿ ಹಿಡಿತೊಳೊ.

* * * * *

# ಕುಂಟ ದಾಸು

ಮನೋಜ್ ಕುಡೇಕಲ್ಲು

ಮೊನ್ನೆ ನಾ ಕುದ್ಕನ ಪಾರೆ ಮೋನಪ್ಪ ಮಾವನಲ್ಲಿಗೆ ಹೋಗಿದ್ದೆ. ಅವೇನ್ ನಂಗೆ ಖಾಸಾ ಮಾವ ಏನ್ ಅಲ್ಲ, ಕೆಳಗೆ ಮನೆ ಅಣ್ಣುಗೆ ಬಾರೀ ಹಕ್ಕಲೆಲಿ ಮಾವಗಡ. ದೆವ್ವಕೆ, ಮೊದ್ವೆ ಬೊಜ್ಜತೇಳಿ ನಮ್ಮ ಬೈಲ್ ದಾರಿಲಿ ಬರೊವು. ಅಣ್ಣುನವರಲ್ಲಿಗೆ ಬಂದ್ ಹೋಗೊವು. ಹಾಂಗೆ ಮಾತಾಡಿ ಹಿಡ್ದ್ ಅಣ್ಣುನ ಮಾವ ನಂಗೆನು ಮಾವ ಆದೊ.

ಮೊನ್ನೆ ಅಣ್ಣುಗೆ ಮೊದ್ವೆ ನಿಶ್ಚಯ ಕಳ್ದ್, ಈಗ ನಾವ್ಗೆಲ್ಲ ಕಾಗದ ಕೊಡ್ವ ಗೌಜಿ. ಒಂದ್ ಮಟ್ಟ್‌ಲಿ ನೆಂಟ್ರ್‌ಗಳಿಗೆ, ನೆರೆಕರೆತೇಳಿ ಊರ್‌ನ ಮುಕ್ಕಾಲ್‌ವಾಸಿ ಕಾಗದ ಕೊಟ್ಟಾತ್. ಹಾಂಗೆ ಮೊನ್ನೆ ಐತಾರ ನಾನು ಅಣ್ಣುನು ಬೈಕ್ ಹತ್ತಿದ್ ಎದುರು ಬೈಲ್‌ಂದಲೇ ಸುರು ಮಾಡಿ ಓಟೆಕಾಡ್ ಮೂಲೆವರೆಗೆ ಕಾಗದ ಕೊಡೊಕೂಂತೇಳಿ, ಹೊರ್‍ಟೊ. ಬೈಲ್‌ಲಿ ಒಂದ್ ನಾಕ್ ಮನೆ ಓಟೆಕಾಡ್ ಮೂಲೆವರೆಗೆನ ಏಳಂಟ್ ಮನೆಗಳ, ನಾಯಿಗಳ ಬೊಗಳ್ಸಿ ಕಂಡ್ ಮನೆವರ ಐತಾರದ ಕೆಲ್ಸನ ಹಾಳ್ ಮಾಡಿ, ನಿಂಬುಳಿ ಸರ್ಬತ್ . ಚಾಯತೇಳಿ ಹೊಟ್ಟೆ ಗಟ್ಟಿಮಾಡಿಕಂಡ್. ಆ ಮನೆಗಳಿಗೆ ಕಾಗದ ಕೊಟ್ಟ್ ಮುಗ್ಸಿಕಾಕನ ಬಿಸ್ಲ್ ನೆತ್ತಿಗೆ ಹೊಡೆತಿತ್ತ್. ಓಟೆಕಾಡ್‌ನ ಕಡ್ಪಕೆ ಒಳದ್ ಕುದ್ಕನ ಪಾರೆ. ಅಲ್ಲಿ ಒಳದ್ ಮೂರೇ ಮನೆಗ. ಅಲ್ಲಿಗೆ ಹೋಕೆ ರೋಡು ಒಳದ್ ಈಚೆ ಪುಡೆಂದ ಅವ್ಕೆ ಕಾಲ್ದಾರಿಲಿ ಪೇಟೆಗೆ ಹಕ್ಕಲೆ ತೇಲ್ರೆ ಚಾರ್‌ಗೆ ಕಟ್ಟಿದ

ಸಂಕ ದಾಟೋಕು. ಹಾಂಗಾಗಿ ಇಲ್ಲಿವರೆಗೆ ಬಂದಾತಲಿ, ಆ ಮನೆಗಳಿಗೂ ಕಾಗದ ಕೊಟ್ಟ್ ಮುಗ್ಸಿಬುಡೊಮೋತ ಅಣ್ಣು ಹೇಳ್ದದ್ಕೆ ನಾ ಒಪ್ಪಿದೆ.

ಓರೆ ಕೋರೆ, ಎಳ್ಕಿ ರೆಟ್ಟಿದ ಕಲ್ಲ್‌ನ ರೋಡುಲಿ ಹೇಗೋ ಕುದ್ಕನ ಪಾರೆ ಗುಡ್ಡೆನ ಬುಡ ಎತ್ತಿದೊ. ಅಕೇರಿಗೆ ಇರ್‍ವ ಮೋನಪ್ಪ ಮಾವನ ಮನೆಗೆ ಸುರುಗೆ ಹತ್ತುದುತೇಳಿ ಹೊರ್‍ಟ, ನಮ್ಮ ದಿಬ್ಬಣ ಅವರ ಮನೆ ಜಾಲ್ ಮುಟ್ಟಿಕೆ ಮುಂದೆ, ಬೆದ್ರ್ ದೂಡ್‌ಲಿದ್ದ ನಾಯಿಗ ಎರ್‍ಡ್, ನಮ್ಮ ನೋಡಿದ್ ಬೊಗಳಿಕೆ ಸುರು ಮಾಡ್ದೊ. ಒಂದು ನಾಯಿ ಗರ್ವಲಿ ಗೂಡುನ ಬೆದ್ರ್ ತಟ್ಟೆನ ಬಾಯಿಲಿ ಜಟ್ಟಿಕಂಡ್ ನನ್ನನೇ ನೋಡ್ತಿತ್ತ್. ಆ ಎರ್‍ಡ್ ನಾಯಿಗ ಬುಟ್ಟಿರತಿದ್ದರೆ ಮೊದುಮಂಜನು ನಾನು ಅವ್ಕೆ ಮಾಸದೂಟ ಆಗ್ತಿದ್ದೊ. ಹಾಂಗೆ ನೆನ್ಸಿದ್ ನಾ ಮನೆ ಪುಡೆನ ನೋಡಕಾರೆ ಕಟ್ಯಾಕದೆ ಮಲ್ಗಿದ್ದ ನಾಯಿ, ತಲೆ ಎತ್ತರ್‍ಸಿ ನಮ್ಮ ನೋಡಿ ತಲೆ ಕೊಡ್ಕಿ ಮತ್ತೆ ಮಲ್ಗಿತ್. ಹುಲಿನ ಹಾಂಗಿದ್ದ ಆ ನಾಯಿ ಕಟ್ಟಿಕೆ ಬಾರದರ ಕಂಡ್ ನನ್ನ ಹೋದ ಜೀವ ಮತ್ತೆ ಬಾತ್

ಬಾಯ್ಗಳ ಆರ್ವಾಡ್ ಕೇಳಿ ಅತ್ತೆನು ಮಾವನು ಹೊರಗೆ ಬಂದೊ. ಕೊಟೆಗೆಲಿ ಅಡ್ಕೆ ಚೊಲ್ಲಿಕಂಡಿದ್ದವ ಮಲ್ಗಿದ್ದ ನಾಯಿಗೆ ಸಂಕೊಲೆ ಹಾಕಿತ್. ಅತ್ತೆ ಒಳಗೆಂದ ಚೊಂಬುಲಿ ನೀರ್ ತಂದ್.. ಕೊಟ್ಟ್ ನಮ್ಮ ಒಳಗೆ ಕರ್‍ದ್ ಚಾವಡಿಲಿ ಕುದ್ದರ್‍ಸಿದೊ. ಅತ್ತೆಗೆ, ಮೊದುವೆನ ಕಡೆಂದ ಕೊಡಿವರೆಗೆನ

ಚಾರ್ = ಸಣ್ಣ ಹಳ್ಳ ಸಂಕ = ಸೇತುವೆ

ಮೊದ್ರೆಂಗಿ, ದಿಬ್ಬಣ, ದಾರೆ, ತುಪ್ಪದ ತಾಳ ಮೇಳತೇಳಿ ಎಲ್ಲದರ ಹೇಳಕಾರೆ ಸಾಕಾತ್. ಅತ್ತೆ ನಮ್ಮ ತಲೆ ತಿಂಬದರ ನೋಡಿ ಸಾಕಾಗಿ ಮಾವ "ನೀ ಹುಡ್ಗರೊಟ್ಟಿಗೆ ಹೀಂಗೆ ಮಾತಾಡಿಕಂಡ್ ಕುದ್ಯನಾ ಅಲ್ಲಾ ಹೊಟ್ಟೆ ಇಸಿಕಂಡ್ ಬಂದ ಅವ್ಕೆ ಏನಾರ್ ಉಟ್ಪಾ..?ತ ಕೇಳ್ದಾಂಗೆ.. ಅತ್ತೆ ಒಳಗೆಂದ ನೀರ್ ತಂದ್ ಕೊಟ್ಟ್ ನಮ್ಮ ಊಟಕೆ ಎದ್ರ್‌ಸಿದೊ.

ನಾವ್ ಮೂರ್ ಜನ ಉಂಬೊಳೆಗೆಲಿದ್ದ ಮೇಜಿಲಿ ಕುದ್ದೊಳೊ. ಬಾಳೆಲೆಗೆ ಹುಗ್ಗೆ ಅಲ್ಸಂಡೆ ಬಿತ್ತ ಸಾರುನು ಹುಳ್ಳಂಗೆ ಇಟ್ಟ್ ಗಸಿನು ಬೀಳ್ತಾಕನ ನನ್ನ ಹೊಟ್ಟೆ ಚೋಳು ತೆಗ್ದ ಕೆರೆನ ಹಾಂಗಾತ್. ಎರ್‍ಡ್ ಪುಂಡಿ ಬಾಯಿಗೆ ಇಸಿದಷ್ಟೆ ನನ್ನ ಮೂಗ್‌ಗೆ ಮಾಸದ ಗೈಪುನ ಪರಿಮಳ ಹತ್ತಿತ್. ತಲೆ ತಿರ್‍ಗ್‌ಸಿ ನೋಡಕಾರೆ ಅತ್ತೆ ಉರ್‍ಳಿಲಿ ಎಂತದೋ ಗೈಪು ತಂದ್ ಚಿಪ್ಪಿ ಸೆಡೆಲಿ ಎರಡ್ ಕೈ ಗಮ್ಮತ್ ಇಕ್ಕಿದೊ. "ಇದೆಂತ ಅತ್ತೆ ? ಕೋಳಿಗೈಪಂತು ಅಲ್ಲಾ, ಮಾವಾ ಬೇಟೆ ಗೀಟೆಲಿ ತಂದದ್ ಎಂತಾರಾ..? ಅಂತೇಳಿ ಅಣ್ಣು ಕೇಳ್ದಕ್ಕೆ "ಇದ್ ಇಂದ್ ಬೊಳ್ಪುಗೆ ನಮ್ಮ ಕುಂಟದಾಸು ತೋಟದ ಕರೆ ತಿರ್‍ಗಿ ಬಾಕನ ಬೀಜಕೊಚ್ಚಿ ಕರೆಂದಳೇ ಇರೊಕು, ದೊಡ್ಡ ಹಡಿ ಮೊಲನ ಹಿಡ್ದ್ ತಾತ್.. ನೀವ್ ತಿಂದ್ಯರಲಾ ಮೊಲದ ಗೈಪು..? ತೇಳಿದ್ ಅತ್ತೆ ಮೊಲದ ಗೈಪುನ ಕತೆ ಹೇಳಿ

ಒಳಗೆ ಮೇಲೆಂದ ಮೇಲೆ ಎರ್ಡ್ ಗುಂಡ್ ಇಳ್ಸಿತ್. ದಾಸು ಬೇನೆ ತಡ್ಯಕೆ ಬೊತ್ತದೆ ಹಿಡ್ತ ಸಡ್ಲ ಮಾಡಿ ಕರೆಗೆ ಹಾರ್‍ತ್. ಜೀವದ ಮರ್ಕಲಿ ಇದ್ದ ಹಂದಿ, ಅಡ್ಡ ಸಿಕ್ಕಿದ ದಾಸುಗೆ ಇನ್ನೇನ್ ಮುಸುಂಡುಲಿ ಗುದ್ದೊಕು ನನ್ನ ಬೆಡಿಂದ ಹಾರ್‍ದ ಗುಂಡ್ ಹಂದಿನ ತಲೆಗೆ ಹುಕ್ಕ್‌ತ್. ಹಂದಿ ಅಡ್ಡ ಮಲ್ಗಿತ್.

"ಅಂದ್ ಎಲ್ಲವ್ಕೆ ಅಮಾಸೆ ಬೇಟೆಲಿ ಹಂದಿ ಸಿಕ್ಕಿದ ಗೌಜಿ ಒಂದ್ ಕಡೆ ಆದರೆ ದಾಸುನ ಕಾಲ್‌ಗಂಟ್ ಹೊಡಿ ಆದ ಸಂಕಟ ಇನ್ನೊಂದ್ ಕಡೆ. ಅಂದ್ ಕತ್ತಲೆಗೆ ದಾಸುನ ನರ್‍ಕಟಕೆ ನಂಗೆ ನಿದ್ದೆನೆ ಬಾತ್ಲೆ. ಕಳ್ಗಿ ಜತ್ತಪ್ಪಣ್ಣ ಬೇನೆಗೆ ಮೊದ್ದು ಮಾಡಿ ತಿಂಗಳ ಒಳಗೆ ಬೇನೆನ ಕರ್‌ಂಚಿಸಿದೊ.. ದಾಸುನ ಕಾಲ್ ಬೇನೆ ಗುಣ ಆತ್, ಹೋದ ಅರ್ಧ ಕಾಲ್ ಮಾತ್ರ ಮತ್ತೆ ಬಾತ್‌ಲೆ... ಅಂದ್‌ಂದ ದಾಸು ಎಲ್ಲರ ಬಾಯಿಗೆ "ಕುಂಟ ದಾಸು" ಆತ್. ನಂಗೆ ಮಾತ್ರ ಅವನ ಕುಂಟ ದಾಸುತ ಕರಿದು ಸರ್ವತ್ತಾ ಸೆರಿಕಾಂಬೊದ್ಲೆ. ಹೀಂಗೆಲ್ಲ ಆಗಿ ಎರ್ಡ್ ತಿಂಗ ಕಳ್ದ ಮೇಲೆ, ಅಂವ ತೋಟಕೆ ಹೋಗಿ ತರ್‍ಗಿ ಬಾಕನ ಮೊಲ ಹಿಡ್ದ್‌ತಾತ್. ಅದರ್‌ಂದ ಮೇಲೆ ಸುಮಾರ್ ಸರ್ತಿ ಬೇಟೆಗು ಬಂದುಟು. ದಾಸುಗೆ ಸಮ ಕಾಂಬ ಇನ್ನೊಂದ್ ನಾಯಿನ ನಾಕಂಡತ್ಲೆತೇಳಿ ಮಾವ ದಾಸುವ ಕಥೆ ಮುಕ್ಸಿದೊ.

ನೀವಿಂದ್ ಬಂದ್ಯರಿತ ದಾಸುಗೆ ಗೊತ್ತಿತ್ತ್ ಕಂಡದೆ ಹಾಂಗೆನೆ ಇರೊಕು. ಬೊಳ್ಪುಗೆ ಅಡ್ಡ ತಿರ್‍ಗಿಕೆ ಹೋದಂವ ಆಚೆಕರೆ ಬೀಜಕೊಚ್ಚಿಂದ ಈ ಮೊಲನ ಹಿಡ್ದ್ ತಂದಾಳ್ದ್. ಇಲ್ಲತ್ಲರೆ ನೀನ್ ಜಾಲ್‌ಗೆತ್ತಿರ್‍ನ ದಾಸು ಬೊಗಳದೇ ಇದ್ದದ್ ವಿಸೇಸನೇ. ಕಚ್ಚು ನಾಯಿ ಅಂವ ಅಲ್ಲ ಅಂದರ್‍ೂ ಹೊಸಬರ್ ಜಾಲ್‌ಗೆ ಬಂದರೆ ಬೊಗಳದೆ ಸುಮ್ಮನಿರಿಕಿಲೆ.. ಎಂತನೋ_ ವಿಸೇಸನೇ..ತೇಳಿ ಅತ್ತೆ ಹೇಳ್ದರ ಕೇಳಿ "ದಾಸುನು ನಾನು .. ಕಳ್ದ ಜನ್ಮಲಿ ಒಂದೇ ಗೂಡುಲಿ ಇದ್ದವೊನೊಂತೇಳಿ ನಂಗೆ ಸಂಶಯ ಬಾತ್.

ಮಾವನ ಕಥೆ ಮುಗ್ಯಕಾಕನ ನನ್ನ ಬಾಳೆಲೆ ಕಾಲಿ ಆತ್.. ಎದ್ರಮನೋಂತೇಳಿ ಒಟ್ಟಿಗೆ ಎದ್ದ್.. ಊಟದ ಕ್ರಮನ ಗಡ್ದ್‌ಲೇ ಮುಗ್ಸಿದೆ. ಅದಾಗಿ ಹಂಞೊತ್ತ್ ಕುದ್ದ್.. ಕಾಗದ ಕೊಡ್ವ ಶಾಸ್ತ್ರ ಮಾಡಿ. ಇನ್ನ್ ನಾವ್ ಕೆಳಗೆ ಮನೆಗೆ ಮುಂದುವರ್‍ಸುವೆತೇಳಿ.. ಇಜ್ಜಲ್‌ಗಿಳ್ದೊ. ನಾ ದಾಸುನ ಒಮ್ಮೆ ಹಕ್ಕಲೆಂದ ಕಾಣಮೋತೇಳಿ ಧೈರ್ಯಲಿ ಮನೆ ಕರೆಗೆ ಹೋದೆ.. ಮೆಲ್ಲಂಗೆ ನನ್ನನೇ ನೋಡ್ತಿದ್ದ ದಾಸುನ ಕೆಪ್ಪೆ ಪೂಜಿ. ನಂಗೆ ಓಸಿಗೆ ಮೊಲದ ಗೈಪುನ ಗಮ್ಮತ್ ಮಾಡ್ಸಿದಕ್ಕೆ ಅವನ ನೆನ್ಸಿಕಂಡೆ.. ಅದರ್‍ೂ ಕುಂಟಿಕಂಡ್ ನಡಿವ ಅವನ ಬೇಟೆನ ತಾಕತ್ತ್‌ನ ಮನ್ಸ್‌ಲೇ ಹೊಗಳಿಕಂಡೆ.

ನಾ ಜಾಲ್‌ತಲೆ ದಾಟ್ವಲ್ಲಿವರೆಗೆ ದಾಸು ನನ್ನನೇ ನೋಡ್ತಿತ್. ಕುಂಟಿದ್ ಎದ್ದ್ ನಿತ್ತರೂ ಗಂಟ್ಲೆತ್ತಿ ಗತ್ತ್‌ಲೇ ನೋಡ್ತಿತ್.

* * * * *

# ಪರಿವರ್ತನೆ

**ಕಟ್ರತನ ಲಲಿತಾ ಅಯ್ಯಣ್ಣ**

"ಸುಮಾ, ನಾಳೆ ಬ್ಯಾಂಕಿಗೆ ರಜ ಹಾಕಿ ಬಾ. ಹೈದನ ಕಡೆಯವು ನಿನ್ನ ನೋಡಿಕೆ ಬಂದವೆ"

ಅಮ್ಮ ಹೇಳ್ಕನ ಸುಮನ ಮುಖ ನಾಚಿಕೆಲಿ ಕೆಂಪಾತ್. ಅವ್ಳ ಮನ್ಸು ಅರಳಿ ಹೂವಾತ್. ಕಾರಣ ಹೊತ್ತಾರೆಂದೇ ಮನೆಲಿ ನಾಳೆ ಬರ್ವ ಹೈದನ ವಿಷ್ಯದ ಬಗ್ಗೆ ಮಾತುಕತೆ ನಡಿಯತ್ತಿತ್ತ್. ಎಲ್ಲವ್ಕೂ ಹೈದ ಒಪ್ಪಿಗೆ ಆಗಿತ್ತ್. ಹೈದನೂ ಯಾವ್ದೋ ಮದ್ವೆಲಿ ಸುಮನ ನೋಡಿ ಮೆಚ್ಚಿಕಂಡಿತ್ತ್. ಆದರೂ ಪದ್ಧತಿ ಪ್ರಕಾರ ಹೈದನ ಮನೆಯವು ಹೆಣ್ಣ್ ಕೇಳಿಕೆ ಬರ್ತಾ ಇದ್ದೊ.

ಹೈದ ಪದವಿ ಓದಿ, ಸರ್ಕಾರಿ ಕೆಲ್ಸಲಿ ಇತ್ತ್. ನೋಡಿಕೆ ಲಕ್ಷಣವಾಗಿತ್ತ್. ಆಸ್ತಿ ಪಾಸ್ತಿ ಇಲ್ಲದಿದ್ದರೂ ಇಬ್ಬರೂ ಚಾಕ್ರಿಲಿ ಇದ್ರಂದ ಮುಂದಕ್ಕೆ ಸಂಪಾದನೆ ಮಾಡಕ್‌ತೇಳ್ವ ಕಾರಣಂದ ಯಾರೂ ಆಸ್ತಿನ ಬಗ್ಗೆ ತಲೆ ಕೆಡ್ಸಿಕಂಡಿತ್ತ್‌ಲೆ

ಉಭಯ ಕಡೆಯವ್ರ ಒಪ್ಪಿಗೆಂದ ಗೌಜಿಲಿ ಮದ್ವೆ ನಡ್ದಿತ್ತ್. ಸುಮ ಎಲ್ಲಾ ಗೂಡೆಗಳಂಗೆ ತನ್ನ ಗಂಡನ ಬಗ್ಗೆ ಪೊರ್ಲುನ ಕನ್ಸ್‌ನ ಮನೆ ಕಟ್ಟಿ ಅದ್ರಲ್ಲಿ ಸುಖವಾಗಿ ಸಂಸಾರ ಮಾಡ್ವ ಕನ್ಸ್ ಕಂಡಿತ್ತ್.

ಆದರೆ, ಮದ್ವೆ ಆದ ಮ್ಯಾಲೆ ಅವ್ಳು ಎದ್ರುಸಕಾಗಿದ್ದ ಪರಿಸ್ಥಿತಿ ಅವ್ಳು ಗ್ಯಾನ ಮಾಡ್ದಕ್ಕಿಂತ ಬೇರೆನೇ ಆಗಿತ್ತ್. ನಾಲ್ಕ್‌ಜನ ಅಣ್ಣಂದ್‌ರ್ ನಾಲ್ಕ್ ಜನ ಅಕ್ಕಂದ್ರ ದೊಡ್ಡ ಸಂಸಾರಲಿ ಕಡೆಯವನಾಗಿದ್ದ ರಮೇಶ, ದೊಡ್ಡವ್ರ ಹ್ಯಾಳೆಂದೊ ಅಥ್ವಾ ಬುದ್ಧಿ ಹೇಳವು ಇಲ್ಲದೆನೋ ವಳ್ಳ ನಡತೆ ಹೊಂದಿತ್ತ್‌ಲೆ. ಮದ್ವೆಗೆ ಮುಂದೆ ಸುಮಾರ್ ವರ್ಷಂದೇ ಚಾಕ್ರಿಲಿ ಇದ್ದರೂ ಒಂದು ಪೈಸೆ ಉಳ್ಸಿತ್‌ಲೆ. ಅಣ್ಣಂದ್ರ್ ಅಕ್ಕಂದ್ರ್ ಅವರವರದೇ ಸಂಸಾರಲಿ ಮುಳ್ಗಿ ಹೋಗಿದ್ದೊ. ತಾನೇ ಸಾಲ ಮಾಡಿ ಮದ್ವೆ ಆಗಿತ್ತ್.

ರಮೇಶ ತನ್ನ ಮದ್ವೆಲಿ ಸಿಕ್ಕಿದ್ದ ದುಡ್ಡ್‌ನ ಪೂರ್ತಿ ಲೆಕ್ಕ ಹಾಕಿಕೆ ಮುಂದೆನೇ ಅಣ್ಣಂದ್ರ್ ತಾವು ಕೊಟ್ಟ ದುಡ್ಡ್‌ನ ವಸೂಲಿಗೆ ಶುರು ಮಾಡಿದ್ದೊ. ಅಕ್ಕಂದ್ರ್ ತಾವು ಹಿಂದೆಂದೋ ಮಾಡಿದ್ದ ಹಣದ ರೂಪದ ಸಹಾಯನ ಸಾಲ ಆಗಿ ಪರಿವರ್ತಿಸಿ ವಸೂಲಿ ಮಾಡಿಕೆ ಮುಂದಾಗಿದ್ದೊ. ಸುಮಂಗೆ ತಲೆ ಚಿಟ್ಟ್ ಹಿಡಿಸುತ್ತಿತ್ತ್.

ಸ್ವಲ್ಪ ಸಮಯ ಕಳಿಯಕನ ರಮೇಶ ಸುಮನೊಟ್ಟಿಗೆ ದುಡ್ಡ್ ಕೇಳಿಕೆ ಶುರು ಮಾಡ್ಕನ ಸುಮಂಗೆ ನಿಜಕ್ಕೂ ಭ್ರಮ ನಿರಸನ ಆಗಿತ್ತ್. ತನ್ನ ಗಂಡ ಜವಾಬ್ದಾರಿ ಇಲ್ಲದವತ ಅವ್ಳಿಗೆ ತಿಳ್ದ್ ಹೋಗಿತ್ತ್. ದಾಂಪತ್ಯ ಜೀವನನೂ ಯಾಂತ್ರಿಕವಾಗಿ ನಡ್ದಿತ್ತ್. ಅಲ್ಲಿ ಪ್ರೀತಿಯ ಅಂಶವೇ ಇತ್ತ್‌ಲೆ.

ಒಂದೆರಡ್ ವರ್ಷ ಅಂವ ಮದ್ವೆಗೆ ಮಾಡಿದ್ದ ಸಾಲ ತೀರ್ಸುದ್ರಲ್ಲೇ ಕಳ್ದ್ ಹೋಗಿತ್ತ್. ಇಬ್ಬರೂ ಒಂದೇ ಊರ್‌ಲಿ ಚಾಕ್ರಿಲಿ ಇದ್ರಂದ ಅವು ಬಾಡಿಗೆ ಮನೆ ಮಾಡಿದ್ದೊ. ಶುರುನ ಮೂರು ವರ್ಷ ಹಂಗೂ ಹಿಂಗೂ ಸ್ವಲ್ಪ ಮಟ್ಟಿಗೆ ಲಾಯ್ಕಲೇ ಜೀವನ ಕಳ್ದಿದ್ದೊ.

ಅಲ್ಲಿಗೆ ಮುಟ್ಟ ಆಫೀಸ್ ಬುಟ್ಟಂಗೆ ಮನೆಗೆ ಬಾತಿದ್ದಂವ ಬರ್ತಾ ಬರ್ತಾ ತಡ ಮಾಡಿಕಂಡ್ ಬಾಕೆ ಶುರು ಮಾಡ್ತ್. ಆಗೆಲ್ಲಾ ಏನಾರ ಒಂದು ನೆವನ ಹೇಳ್ತಿತ್ತ್. ಕಡೆಲಿ ತಿಳ್ದದ್ದೇ ಬೇರೆ. ರಮೇಶ ಇಸ್ಪೀಟಿನ ದಾಸ ಆಗಿತ್ತ್. ಆಡಿಕೆ ಸಾಲ ಮಾಡ್ದು ಮತ್ತೆ ಸಂಬಳಲಿ ಸಾಲ ತೀರ್ಸುದು. ಸಂಬಳ ಕಮ್ಮಿಯಾಕನ ಮನೆನ ಜವಾಬ್ದಾರಿಂದ ನುಣ್‌ಚಿಕಂಬತ್ತಿತ್ತ್. ಇದ್ರಂದ ಸುಮ ಶುರುಗೆ ವಳ್ಳೆ ಮಾತ್‌ಲಿ ಹೇಳ್ತ್ ಮತ್ತೆ ಪ್ರತಿಭಟಿಸಿತ್, ಮರ್ಲ್ತ್, ಜಗಳ ಮಾಡ್ತ್. ಒಂದೆರಡ್ ದಿನ ಸರಿ ಇರ್ತಿತ್ತ್. ಇನ್ನ್ ಖಂಡಿತ ಹಿಂಗೆ ಮಾಡ್ದುಲೆತ ಪ್ರಮಾಣ ಮಾಡ್ದು ಮತ್ತೆ ಕಲ್ತ ಚಾಳಿನ ಮುಂದುವರ್ಸಿತ್. ಇದ್ ಪ್ರತಿ ತಿಂಗಳ ಕತೆ ಆತ್. ಗಾದೆ ಉಟ್ಟಲ್ಲ, 'ಹೆಂಡ್ರ್‌ನಾದ್ರ್ ಬುಟ್ಟೇನ್ ಕಲ್ತದ್ ಬುಡ್ಲಿಲೆತ' ಹಂಗೇ ಆಗಿತ್ತ್ ರಮೇಶನ ಕತೆ.

ಸುಮಂಗೆ ದಿಕ್ಕೇ ತೋಚದಂಗೆ ಆತ್. ತನ್ನ ಸಂಸಾರದ ಗುಟ್ಟ್ ಯಾರೊಟ್ಟಿಗೂ ಹೇಳಿಕಂಬಂಗೆ ಇಲ್ಲೆ. ಆದರೆ ಎಷ್ಟ್ ದಿನ ಮುಚ್ಚಿ ಮಡ್ಗಿಕೆ ಸಾಧ್ಯ. ಮನೆಗೆ ನೆಂಟರಿಷ್ಟರ್ ಬಾಕನ ರಮೇಶ ಮನೆಲಿ ಇರ್ತಿತ್ತ್‌ಲೆ. ಸುಮ ತನಿಗೆ ತಿಳ್ದ ಸುಳ್ಳ್‌ನೆಲ್ಲಾ ಹೇಳ್‌ತ್. ಆದರೆ ಸತ್ಯ ಹೊರಗೆ ಬಾಕೆ ಬಾಳ ದಿನ ಬೇಕಾತ್‌ಲೆ. ರಮೇಶ 'ಹೇಳ್ದ ಮಾತ್ ಕೇಳ್ದುಲೆ ಸ್ವಂತ ಬುದ್ಧಿ ಇಲ್ಲದ' ಗುಂಪಿಗೆ ಸೇರಿತ್ತ್.

ಸುಮ ತನ್ನ ಒಬ್ಬಳ ಸಂಬಳಂದ ಇಡೀ ಮನೆ ಖರ್ಚ್‌ವೆಚ್ಚನ ತೂಗಿಸಕಾಗಿತ್ತ್. ಎರಡ್ ಮಕ್ಕ ಒಟ್ಟಿಗೆ ಅತ್ತೆ, ಮಾವ, ಕೂಸ್‌ನ ನೋಡಿಕಂಬ ಜನ, ಹೊತ್ತ್ ಗೊತ್ತಿಲ್ಲದೆ ಮನೆಗೆ ಬರ್ವ ಗಂಡ ಮನೆಗೆ ಬರ್ವ ನೆಂಟರ್‌ಗ. ರಮೇಶ ಎಷ್ಟೋ ತಿಂಗ ಸಂಬಳನೇ ಕೊಡ್ತಿತ್ತ್‌ಲೆ.

ಅತ್ತೆ ಮಾವಂಗೆ ಶುರುಂದೇ ಅಭ್ಯಾಸ ಆಗಿದ್ರಂದ ಅವ್ಕೆ ತಮ್ಮ ಮಂಜನ ತಪ್ಪು ದೊಡ್ಡದಾಗಿ ಕಾಂಬತಿತ್‌ಲೆ. ಒಟ್ಟಿಗೆ ಸುಮ ತಾನ್ ಉಪವಾಸ ಇದ್ದರೂ ಅವ್ಕೆ ಕಮ್ಮಿ ಮಾಡ್ತಿತ್‌ಲೆ. ಸುಮಂಗೆ ಪುಕ್ಸಟೆಯಾಗಿ ಸಿಕ್ಕ್‌ತಿದ್ದದ್ ಕಣ್ಣೀರ್ ಮಾತ್ರ. ತನ್ನ ಕಷ್ಟ ಕಾಲಕೆತ ಜೋಪಾನ ಮಾಡ್‌ತಿದ್ದ ದುಡ್ಡೆಲ್ಲಾ ರಮೇಶ ಸಂಬಳದ ಹಣ ಮನೆಗೆ ಕೊಡದ ತಿಂಗ ಕರ್ಗಿ ಹೋತಿತ್ತ್.

ಕೂಸ್‌ನಂತ ಮನಸ್ ಇದ್ದ ಸುಮ ಬರ್ತಾ ಬರ್ತಾ ಕಠಿಣಳಾಗಿ ಬುಡ್ತ್. ಭಂಡತನದಿಂದ ತನ್ನ ಅನ್ನಕೆ ಬಂದ್ ಬೀಳ್‌ವ ಗಂಡತೇಳ್ವ ಪ್ರಾಣಿತೇಳ್ರೆ ಅಸಹ್ಯವಾಗುವಷ್ಟ್

ಅವ್ವು ರೋಸಿಹೋಗಿತ್ತ್.

ಯಾವುದೇ ವಸ್ತುನ ತಾಕೆ ಅಂಗಡಿಗೆ ಕಳ್ಸಿರೂ ಆ ದುಡ್ಡ್‌ನ ತಕಂಡ್ ಹೋಗಿ ಆಡಿ ಬಾತಿತ್ತ್. ಇದ್ರಂದಾಗಿ ಮನೆ ಸಾಮಾನ್ ತಾಕೆ ತಾನೇ ಅಂಗಡಿಗೂ ಹೋಕಾಗಿತ್ತ್. ಒಮ್ಮೆ ಕೂಸ್‌ಗೆ ಜ್ವರ ಬಂದಿರ್ಕನ ಮದ್ದ್ ತಾಕೆ ದುಡ್ಡ್ ಕೊಟ್ಟರೆ ಅದ್ನ ಸಹ ಹೋಗಿ ಆಡಿ ಕಳ್ದ್ ಬಂದಿತ್ತ್.

"ಇಸ್ಪೀಟಿನ ಸಂಗಾತಿ ಸುಳ್ಳ್" - ರಮೇಶ ಸುಳ್ಳು ಹೇಳುದ್ರಲ್ಲಿ ನಿಸ್ಸೀಮ ಆಗಿತ್ತ್. ಪ್ರತಿಸಲ ಹಣ ಕಳ್ದ್ ಬಾಕನ ಹೊಸ ಹೊಸ ಸುಳ್ಳ್‌ನ ಸೃಷ್ಟಿ ಮಾಡಿ ಹೇಳ್‌ತಿತ್ತ್.

ಬರ್ತಾ ಬರ್ತಾ ಸಂಬಳ ತಕಂಡ ಮ್ಯಾಲೆ ಎರ್ಡ್ ಮೂರ್ ದಿನ ಮನೆಗೇ ಬಾತಿತ್ತ್‌ಲೆ. ಆಡಿ ಉಳ್ದರೆ ಆತ್, ಇಲ್ಲರೆ ಬರಿಗೈಲಿ ಮನೆಗೆ ಬಾತಿತ್ತ್. ಸುಮ ಮರ್‍ಟ್ ಮರ್‍ಟ್ ಅವ್ಳ ಕಣ್ಣೀರೇ ಬತ್ತಿ ಹೋಗಿತ್ತ್.

ಎಷ್ಟೋ ಸಲ ಅವ್ವು ಸತ್ತ್ ಬುಟೆತ ಗ್ಯಾನ ಮಾಡಿತ್ತ್ ಆದರೆ ಮುದ್ದು ಮಕ್ಕಳ ಮುಖ ನೋಡ್ಕನ ಅವ್ಳ ನಿರ್ಧಾರ ಬದ್ಲಾಗ್‌ತಿತ್ತ್ ಮಕ್ಕಳ ತಬ್ಬಲಿ ಮಾಡಿ ಹೋಕೆ ಮನ್ಸೇ ಬಾತಿತ್ತ್‌ಲೆ.

ತಮ್ಮ ಸ್ಥಿತಿ ಲಾಯ್ಕ ಇರ್ಕನ, ಮತ್ತೆ ರಮೇಶನ ಕೆಟ್ಟ ಚಾಳಿಯ ಪರಿಚಯ ಎಲ್ಲವ್ಕೂ ತಿಳಿಯಕೆ ಮುಟ್ಟ ಬಂದ್ ಹೋಗಿ ಮಾಡ್ತಿದ್ದ ನೆಂಟರಿಸ್ಟರ್ ಬರ್ತಾ ಬರ್ತಾ ಯಾರೂ ಇತ್ತ ಮುಖ ಹಾಕ್‌ತಿತ್ತ್‌ಲೆ. ಇದ್ರಂದ ಸುಂಮಂಗೆ ಒಂದ್ ವಿಧಲಿ ದುಃಖ ಆದರೂ, ನೆಂಟ್ರಿಗೆ ಮಾಡಿ ಹಾಕುವ ಖರ್ಚ್‌ಂದ ತನ್ನ ಮಕ್ಕಳ ಹೊಟ್ಟೆ ತುಂಬಿಸಕ್‌ತೇಳಿ ನೆಮ್ಮದಿಯಾಗ್‌ತಿತ್ತ್., ನೋಡುವವರ ಕಣ್ಣಿಗೆ ಗಂಡ ಹೆಣ್ಣ್‌ನಂಗೆ ಕಂಡರೂ ಒಳಗೊಳಗೆ ಇವರಿಬ್ಬರ್‌ಲಿ ಯಾವುದೇ ಸಂಬಂಧ ಉಳ್ದಿತ್ತ್‌ಲೆ.

ಈ ನಡುಲಿ ಅತ್ತೆ ಮಾವಂದರಿಗೆ ಇವರ ಕಷ್ಟಂದ ಅವರ ಸುಖ ಜೀವನಕ್ಕೆ ಸ್ವಲ್ಪ ಕಷ್ಟವಾದ್ರಂದ ಬ್ಯಾರೆ ಮಕ್ಕಳ ಮನೆಗೆ ಜಾರಿದೊ. ಇದ್ರಂದ ಸುಮಗೆ ನೆಮ್ಮದಿ ಆತ್.

ಸುಮನ ಪ್ರಪಂಚತೇಳ್ರೆ ತನ್ನ ಮಕ್ಕ ಮಾತ್ರ. ಅವರ್ನ ಲಾಯ್ಕಲಿ ಓದ್ಸಿ ಒಂದ್ ದಾರಿಗೆ ಸೇರ್ಸುದೇ ಅವಳ ಗುರಿಯಾಗಿತ್ತ್. ಮಕ್ಕ ಸಹ ಸರಿಯಾದ ಪೋಷಣೆ ಇಲ್ಲದೆ ಬಡವಾಗಿದ್ದೊ. ವಳ್ಳ ಬಟ್ಟೆ ಸಹ ಇತ್ತ್‌ಲೆ. ಇದೆಲ್ಲಾ ನೋಡಿ ಸುಮನ ಕರುಳ್ ಚುರುಕ್ ತೇಳ್ತಿತ್ತ್.

ಹಿಂಗೇ ಎಷೋ ವರ್ಷಗ ಕಳ್ದ್ ಹೋದೋ. ರಮೇಶ ಎಲ್ಲೆಲ್ಲಿ ಸಾಲ ಸಿಕ್ಕಿದೋ ಅಲ್ಲೆಲ್ಲಾ ಸಾಲ ಮಾಡಿತ್ತ್. ಸಾಲಗಾರರ್ ಮನೆಗೆ ಬಾಕೆ ಶುರು ಆಕನ ಸುಮ ಸುಸ್ತಾಗಿ ಬುಟ್ಟ್.

ಇದೇ ಸಮೆಲಿ ಅಪ್ಪನ ಸ್ನೇಹಿತರಾಗಿದ್ದ ಸೋಮಯ್ಯನವು ಸುಮನ ಬ್ಯಾಂಕಿಗೆ

ಮ್ಯಾನೇಜರಾಗಿ ಬಂದೊ. ಯಾಗೊಲೂ ಬಾಡಿದ ಮುಖ ಹೊತ್ತು ಬ್ಯಾಂಕಿಗೆ ಬರ್ವ ಸುಮನ ಕಂಡರೆ ಅವ್ಕೆ ಅನುಕಂಪ ಮೂಡ್‌ತ್ತಿತ್ತ್. ಅವಳ್ನ ಹೆಂಗೆ ಕೇಳ್ದುತೇಳ್ವ ಅಳುಕು ಅವ್ಕೆ. ಅವ್ಕೆ ಅವ್ಳದೇ ವಯಸ್‌ನ ಮಗಳ್ ಇತ್ತ್. ಅವ್ಳು ಸುಖವಾಗಿ ಸಂಸಾರ ಮಾಡಿಕೊಂಡಿತ್ತ್. ಅವ್ಳಿಗೂ ಇವ್ಳಿಗೂ ಹೋಲ್ಸಿರೆ ಅಜಗಜಾಂತರ ವ್ಯತ್ಯಾಸ ಇತ್ತ್.

ಒಂದ್ ದಿನ ಸೋಮಯ್ಯನವು ಸುಮನ ಕರ್ದ್ ಅವ್ರ ಚೇಂಬರ್‌ಲಿ ಕೂರ್ಸಿಕಂಡ್ ವಿಚಾರ್ಸ್‌ಕನ ಸುಮನ ದುಃಖದ ಕಟ್ಟೆ ಒಡ್ದ್ ಹೋತ್. ಇದ್‌ಕೆ ಮುಟ್ಟ ಯಾರೂ ಅವಳ್ನ ಇಷ್ಟೊಂದು ಪ್ರೀತಿಂದ ಕಷ್ಟ ಸುಖ ವಿಚಾರಿಸಿತ್ತ್‌ಲೆ. ಅವ್ಳ ಮನೆಯವು ಸಹ ತಿಳ್ದೂ ತಿಳಿಯದಂಗೆ ಇದ್ದ್ ಬುಟ್ಟಿದ್ದೊ. ಸ್ವಾಭಿಮಾನಿಯಾಗಿದ್ದ ಸುಮ ಸಹ ತನ್ನ ಕಷ್ಟ ಹೇಳಿಕಂಡ್ ತವರಿಗೆ ಹೋದವಳಲ್ಲ.

ಸುಮನ ಕಣ್ಣೀರ್ ಮುಗಿಯಕ್ಕೆ ಮುಟ್ಟ ಸುಮ್ಮನಿದ್ದ ಸೋಮಯ್ಯನವು ತಾವು ತನ್ನ ಕೈಲಾದ ಸಹಾಯ ಮಾಡ್ನೆತ ಭರವಸೆ ಕೊಟ್ಟ ಮ್ಯಾಲೆ ಸುಮ ತನ್ನ ಗೋಳ್‌ನ ಕತೆನ ಹೇಳಿಕಂಡತ್. ಅವ್ಳ ಕತೆ ಕೇಳಿ ಅವ್ರ ಕಣ್ಣ್‌ಲಿ ಸಹ ನೀರ್ ಬಾತ್. ಅವ್ಳಿಗೆ ಬದ್ಕ್‌ಲಿ ಮುಂದೆ ಬಾಕೆ ಧೈರ್ಯ ತುಂಬಿದೊ. ತಮ್ಮ ಮನೆಗೆ ಕರ್‍ಕೊಂಡ್ ಹೋಗಿ ತಮ್ಮ ಹೆಣ್ಣಿಗೆ ಪರಿಚಯ ಮಾಡ್ಸಿಕೊಟ್ಟೊ. ಜಾನಕ್ಕಿನವು ಅವಳ್ನ ತಮ್ಮ ಮಗಳಂಗೆ ಉಪಚಾರ ಮಾಡ್ದೊ.

ಮುಂದೆ ಹದಿನೈದೇ ದಿನಲಿ ತಮ್ಮ ಪರಿಚಯದವು ಮ್ಯಾನೇಜನರಾಗಿದ್ದ ದೂರದ ಬ್ರಾಂಚಿಗೆ ಅವಳ್ನ ವರ್ಗ ಮಾಡ್ಸಿದೊ. ತಾವೇ ಮುಂದೆ ನಿಂತ್ತ್ ಅವ್ಳಿಗೆ ಎಲ್ಲ ವ್ಯವಸ್ಥೆ ಮಾಡಿಕೊಟ್ಟೊ. ಬಾಡಿಗೆ ಮನೆ ಮಾಡಿಕೊಟ್ಟ್ ಮಕ್ಕಳ್ನ ಶಾಲೆಗೆ ಸೇರ್ಸುದ್ರಂದ ಹಿಡ್ದ್ ಪ್ರತಿಯೊಂದ್ ರೀತಿಲೂ ಅವು ಅವ್ಳಿಗೆ ಸಹಾಯ ಮಾಡ್ದೊ.

ಇಷ್ಟೆಲ್ಲಾ ಆದರೂ ರಮೇಶಂಗೆ ಇದ್ ಗೊತ್ತೇ ಆತ್‌ಲೆ. ಎಂದ್‌ನಂಗೆ ಸಂಬಳ ತಕಂಡ್ ಎರ್ಡ್ ಮೂರ್ ದಿನ ಇಸ್ಪೀಟ್ ರೇಸುತೇಳಿ ಮಜಾ ಮಾಡಿ ಮನೆಗೆ ಬಂದ್ ಇಡೀ ವಠಾರ ಕೇಳುವಂಗೆ ಮಧ್ಯರಾತ್ರಿ ಕಾಲಿಂಗ್ ಬೆಲ್ ಒತ್ತ್‌ಕನ ಪಕ್ಕದ ಮನೆಲೇ ಇದ್ದ ಮನೆ ಓನರ್ ಬಂದ್ ಸುಮ ಮನೆ ಖಾಲಿ ಮಾಡ್ದ ವಿಷ್ಯ ತಿಳ್ಸ್‌ಕನೇ ಅಂವ ಬಾಗ್‌ಲಿಗೆ ಹಾಕಿದ ಬೀಗನ ನೋಡ್ದ್. ಅವನ ಮತ್ತ್ ಇಳ್ದ್ ಹೋಗಿತ್ತ್. ಕಾಲೆಳ್‌ದ್‌ಕಂಡ್ ಅಲ್ಲಿಂದ ಹೋದಂವ ಮತ್ತೆ ಬಂದ್ ಜಗಲಿಲೇ ರಾತ್ರಿ ಪೂರಾ ಕಳ್ದ್.

ಸುಮನ ಮನೆ ಓನರ್‌ಗೆ ಮತ್ತೆ ನೆರೆಕರೆಯವ್ಕೆ ಬಾಳ ಇಷ್ಟ ಇತ್ತ್. ಹೊರ್ಡಿಕೆ ಮುಂದೆ ಎಲ್ಲವ್ಕೂ ವಿಷ್ಯ ತಿಳ್‌ಸಿ ಗಂಡಂಗೆ ತಾನ್ ಇರ್ವ ಜಾಗ ತಿಳ್ಸ್‌ಬಡೀತ ಭಾರದ ಮನ್‌ಂದ ಹೇಳಿ ಹೋಗಿತ್ತ್. ರಮೇಶನ ಬಗ್ಗೆ ಯಾರಿಗೂ ಕನಿಕರ ಸಹ ಇತ್ತ್‌ಲೆ. ಬೆಳಿಗ್ಗೆ ಮನೆ ಓನರ್ ಸುಮ ಇಟ್ಟ್ ಹೋಗಿದ್ದ ಅವನ ಹಾಸಿಗೆ ಬಟ್ಟೆಗಳ್ನ ಅವಂಗೆ

ಕೊಟ್ನೋ.

ರಮೇಶ ಪಾತಾಳಕ್ಕೆ ಇಳ್ದ್ ಹೋತ್. ಅಂವ ಈಗ ತಬ್ಬಲಿನಂಗೆ ಆಗಿತ್ತ್. ಅವಂಗೆ ಇದೇ ಮೊದ್ಲಿಗೆ ಸುಮ ಇಲ್ಲದ ಬ್ಯಾನೆ ಕಾಡಿಕೆ ಶುರುಆತ್. ಆದರೆ ಕಾಲ ಮಿಂಚಿ ಹೋಗಿತ್ತ್. ಕೆಟ್ಟ ಮೇಲೆ ಬುದ್ಧಿ ಬಂದರೆ ಏನ್‌ಫಲ. ಕೈಲಿ ಕಾಸ್ ಇತ್ತ್‌ಲೆ. ಸುಮ ಇರ್‍ಕನ ಭಂಡತನದಿಂದ ಹೆದರ್‍ಸಿ ಬೆದರ್‍ಸಿ ಊಟ ಮಾಡ್‌ತ್ತಿತ್ತ್. ಎಷ್ಟೋ ದಿನ ಸುಮ ಅರೆಹೊಟ್ಟೆ, ಬರಿ ಹೊಟ್ಟೇಲಿ ಮಲ್ಗಿತ್ತ್. ಮಕ್ಕಳ್ನ ಸಹ ಒಂದ್‌ಸಲ ವಿಚಾರ್‍ಸಿದಂವ ಅಲ್ಲ. ಅವುಕೆ ಪಾಠ ಹೇಳಿ ಕೊಟ್ಟವನಲ್ಲ. ಎಷ್ಟೋದಿನ ಮಕ್ಕ ಅಪ್ಪನ ಮುಖ ನೋಡಿಕೆ ಆತಿತ್‌ಲೆ. ಯಾಕೆತೇಳ್ರೆ ಮಕ್ಕ ಮಲ್ಗಿದ ಮ್ಯಾಲೆ ಮನೆಗೆ ಬಾತಿತ್ತ್. ಮಕ್ಕ ಏಳಿಕೆ ಮುಂದೆ ಮನೆಂದ ಹೋಗಿ ಆಗ್‌ತಿತ್ತ್. ಮಕ್ಕಳಿಗೂ ಅಪ್ಪತೇಳ್ವ ಅಕ್ಕರೆ ಇತ್ತ್‌ಲೆ. ಅವ್ಕೆ ಅಮ್ಮನೇ ಸರ್ವಸ್ವ.

ರಮೇಶನ ಅವಸ್ಥೆನ ನೋಡಿ ಮನೆ ಓನರ್ ಒಂದ್ ವಾರದ ಮಟ್ಟಿಗೆ ಉಳ್ಕಣಿಕೆ ಒಂದ್ ಸಣ್ಣ ಕೋಂಬರೆನ ಬಿಟ್ಟ್ ಕೊಟ್ಟಿದ್ದೊ.

ರಮೇಶ ಬ್ಯಾಂಕಿಗೆ ಹೋಗಿ ವಿಚಾರ್‍ಸಿರು ಸುಮನ ಅಡ್ರೆಸ್ ಸಿಕ್ಕಿತ್ತ್‌ಲೆ. ಅದ್ರ ಬದ್ಲಿಗೆ ಮ್ಯಾನೇಜರ್ ಸೋಮಯ್ಯನವು ಅವಳ್ನ ಇನ್ನಾರ ಬದ್ಕಿಕೆ ಬುಡ್‌ತೇಳಿ ಚೀಮಾರಿ ಹಾಕಿ ಕಳ್ಸಿದೊ.

ರಮೇಶ ಊಟ ನಿದ್ದೆ ಸರಿಯಿಲ್ಲದೆ ಕಂಗಾಲಾತ್. ಒಟ್ಟಿಗೆ ಮನೆ ಓನರ್ ಯಾಗ ಕೋಂಬರೆನ ಖಾಲಿ ಮಾಡಿಯಾತ ಕೇಳಿಕೆ ಶುರು ಮಾಡ್ದೊ. ಬ್ಯಾರೆ ಎಲ್ಲಿಯೂ ಅವಂಗೆ ಇರಿಕೆ ಒಂದ್ ಕೋಂಬರೆ ಸಿಕ್ಕಿಲ್ಲೆ. ಸಿಕ್ಕಿರೂ ಅಡ್ವಾನ್ಸ್ ಕೊಡ್ಕೆ ಅವನತ್ರ ದುಡ್ಡ್ ಇತ್ತ್‌ಲೆ.

ಅವರ ಇಸ್ಪೀಟಾಟದ ಸ್ನೇಹಿತರೆಲ್ಲಾ ಮುಖ ತಿರ್‍ಗಿಸಿದ್ದೊ. ಈಗ ಅವಂಗೆ ಸುಮ ಮತ್ತೆ ಮಕ್ಕಳ ಗ್ಯಾನ ಬಾಳಾ ಆಗ್‌ತಿತ್ತ್. ತಾನ್ ಸುಮಂಗೆ ಬಾಳಾ ಅನ್ಯಾಯ ಮಾಡಿಬುಟ್ಟೆತ ಮರ್‍ಗ್‌ತಿತ್ತ್. ತನ್ನ ಕೈಯಾರೆ ತನ್ನ ಬದ್ಕ್‌ನೊಟ್ಟಿಗೆ ಮುಗ್ಧ ಸುಮ ಮತ್ತೆ ಮಕ್ಕಳ ಬದ್ಕಿಗೆ ಅಂವ ಕಿಚ್ಚ್ ಹಚ್ಚಿತ್ತ್.

ಸೋಮಯ್ಯನವು ರಮೇಶಂದ ಸುಮನ ದೂರ ಮಾಡಿಕೆ ಕಾರಣ ಇತ್ತ್. ಇಬ್ಬರೂ ಒಟ್ಟೊಟ್ಟಿಗೆ ಇದ್ದರೆ ಸುಮನ ಬೆಲೆ ರಮೇಶಂಗೆ ಗೊತ್ತಾಗ್‌ತಿತ್ತ್‌ಲೆ. ರಮೇಶ ತನ್ನ ತಪ್ಪ್‌ನ ತಿದ್ದಿಕಂಡ್ ಸರಿಯಾದ ಮ್ಯಾಲೆ ಅವರಿಬ್ರನ್ನ ಒಟ್ಟಿಗೆ ಸೇರ್‍ಸುದು ಅವರ ಗ್ಯಾನ ಆಗಿತ್ತ್. ಅದ್ರಂದ ರಮೇಶನ ಸಹ ಅವು ಗಮನಿಸಿಕಂಡೇ ಇದ್ದೊ.

ಸ್ವಲ್ಪ ವರ್ಷಗಳೇ ಕಳ್ದ್ ಹೋಗಿದ್ದೊ. ಮಕ್ಕ ಎಲ್ಲಾ ಬೆಳ್ದ್ ದೊಡ್ಡವರಾಗಿದ್ದೊ ಸುಮಂಗೆ ರಮೇಶ ಇಲ್ಲದ ಕೊರತೆ ಬುಟ್ರೆ ಬದ್ಕ್ ಪ್ರಶಾಂತವಾಗಿತ್ತ್. ಹಿಂದೆನ ನೆಮ್ಮದಿ

ಕೆಡ್ಸುವ ಯಾವ ಘಟನೆಗಳ್ಗೆ ಅವಕಾಶವಿತ್ತ್‌ಲೆ. ಮಕ್ಕ ಸಹ ಒಳ್ಳೆ ಪರಿಸರಲಿ ಲಾಯ್ಕ ಬೆಳ್ದಿದ್ದೊ. ಅವ್ಕೆ ಹೆಚ್ಚ್ ಕಮ್ಮಿ ರಮೇಶನ ಗ್ಯಾನ ಮಾಸತೊಡ್ಗಿತ್ತ್. ಸುಮ ಅಪ್ಪ ಅಮ್ಮ ಎರ್ಡೂ ಆಗಿ ಅವರ್‍ನ ಬೆಳ್ಸಿತ್ತ್. ಇದ್ದದ್ರಲ್ಲಿ ಅಚ್ಚುಕಟ್ಟಾಗಿ ಸಂಸಾರ ಸಾಗಿತ್ತ್. ಸುಮಂಗೆ ಪ್ರಮೋಷನ್ ಸಿಕ್ಕಿತ್. ಆದ್ರಂದ ಅವ್ಳ ಸಂಬಳನೂ ಜಾಸ್ತಿ ಆಗಿತ್ತ್.

ರಮೇಶ ಮಾತ್ರ ಗುರ್ತೇ ಸಿಕ್ಕದಂಗೆ ಬದ್ಲಾಗಿತ್ತ್. ಕೆದ್ರಿದ ತಲೆ ಮುದುರಿದ ಬಟ್ಟೆ, ಆರೈಕೆ ಇಲ್ಲದ ಶರೀರ. ಎಲ್ಲವ್ಕೂ ಇವ್‌ನ ವಿಷ್ಯ ತಿಳ್ದಿದ್ರಂದ ಎಲ್ಲವೂ ಅವ್ನ ಹೀಯಾಳ್ಸಿ ನಗಾಡ್ತಿದ್ದೊ. ಕೆಲ್ಸ ಮಾಡ್ವ ಜಾಗಲೂ ಅವಂಗೆ ಬೆಲೆ ಇತ್ತ್‌ಲೆ. ಅಂವ ಈಗ ಇಸ್ಪೀಟಾಟ ಬುಟ್ಟಿತ್ತ್. ತನ್ನ ಪೋರ್ಲುನ ಬದ್ಕೇ ನೆಲೆ ತಪ್ಪಿದ ದೋಣಿನಂಗೆ ಆದ ಮ್ಯಾಲೆ ಅವಂಗೆ ಬುದ್ಧಿ ಬಂದಿತ್ತ್.

ಒಂದ್ ದಿನ ಆಫೀಸ್‌ಲಿ ಕೆಲ್ಸ ಮಾಡ್ಕಂಡ್ ಇರ್ಕನ ಸ್ವಲ್ಪ ಸಮೆಂದ ಅಂಟಿಕೊಂಡಿದ್ದ ಬಿಡದೇ ಬಾತಿದ್ದ ಕೆಮ್ಮ್‌ಂದ ರಕ್ತಕಾರಿ ಅಂವ ಸ್ವಯ ತಪ್ಪಿ ಬೀತ್. ಆಫೀಸ್‌ಲಿ ಇದ್ದವು ಎಲ್ಲಾ ಸೇರಿ ಅವನ ಆಸ್ಪತ್ರೆಗೆ ಸೇರ್‍ಸಿಸೊ. ಡಾಕ್ಟರ್ ಅವನ ಪರೀಕ್ಷೆ ಮಾಡಿ ಅವಂಗೆ ಕ್ಷಯರೋಗ ಬಂದುಟ್ಟುತ ಹೇಳ್ದೊ. ಅವನ ಯಾರೂ ನೋಡಿಕಂಬವು ಇತ್ತ್‌ಲೆ. ಆಗೊಮ್ಮೆ ಈಗೊಮ್ಮೆ ಬಾತಿದ್ದ ಅವನ ಜೊತೆಯವು ತಮಿಗೆ ಎಲ್ಲಿ ಅಂಟಿ ಬುಡ್ದೋತ ದೂರಂದ ನೋಡಿ ಹೋಗ್‌ತಿದ್ದೊ.

ಸೋಮಯ್ಯನವು ರಿಟೈರ್ ಆಗಿ ಅದೇ ಊರ್‌ಲಿ ಮನೆ ಮಾಡಿ ಕಂಡಿದ್ದೊ. ಸ್ವಲ್ಪ ದಿನ ಕಳ್ದ ಮ್ಯಾಲೆ ಅವ್ಕೆ ವಿಷ್ಯ ಗೊತ್ತಾತ್. ಇನ್ನ್ ತಡ ಮಾಡ್ದು ಸರಿಯಲ್ಲತೇಳಿ ಅವು ಸುಮಂಗೆ ವಿಷ್ಯ ತಿಳ್ಸಿ ಕರ್‍ಕಂಡ್ ಬಂದೊ. ಸುಮನ ಕಂಡ್ ರಮೇಶನ ಕಣ್ಣ್‌ಲಿ ನೀರ್ ಹರಿಯಕೆ ಶುರು ಆತ್. ಸುಮ ಮುಜುಗರ ಪಡದೆ ಮೂಳೆ ಚಕ್ಕಳ ಆಗಿದ್ದ ರಮೇಶಂಗೆ ವಳ್ಳ ಮದ್ದ್ ಕೊಡ್ಸಿತ್. ರಮೇಶನ ಹತ್ರ ಈಗ ದುಡ್ಡ್ ಇತ್ತ್. ಆದರೆ ಅವಂಗೆ ಅವನವರಾಗಿ ಯಾರೂ ಇತ್ತ್‌ಲೆ.

ರಮೇಶ ಸರಿ ಹೋಕೆ ಕೆಲವು ತಿಂಗಗಳೇ ಬೇಕಾದೊ. ಅಂವ ಸ್ವಲ್ಪ ಚೇತರಿಸಿಕಣಿಕೆ ಮುಟ್ಟ ಸುಮ ಬ್ಯಾಂಕಿಗೆ ರಜ ಹಾಕಿತ್. ಒಂದ್ ಕಾಲಲಿ ಅವನ ಹೆಣ್ಣ್ ಆಗಿದ್ದ ಒಂದೇ ಕಾರಣಕ್ಕೆ ಮನುಷ್ಯತ್ವಂದ ಅವನ ಸೇವೆ ಮಾಡಿತ್ತ್. ಮತ್ತೆ ವಾರಕ್ಕೊಮ್ಮೆ ಬಂದ್ ನೋಡಿಕಂಡ್ ಹೋಗ್‌ತಿತ್ತ್. ಅದ್‌ಒಂದ್ ಕರ್ತವ್ಯ ತೇಳ್ವಂಗೆ ತನ್ನ ಕೆಲ್ಸ ಮಾಡಿತ್ತ್. ಮಕ್ಕ ಸಹ ಕೆಲವು ಸಲ ಬಂದ್ ಹೋಗಿದ್ದೊ.

ರಮೇಶನ ಕಾಯಿಲೆ ಪೂರ್ತಿ ವಾಸಿಯಾದ ಮ್ಯಾಲೆ ಒಂದ್ ದಿನ ಡಾಕ್ಟರ್ ಮಾರನೆ ದಿನ ಡಿಸ್‌ಚಾರ್ಜ್ ಮಾಡಿ ಮನೆಗೆ ಕಳ್ಸಿನೆತ ಹೇಳ್ಕನ ಸುಮ ಮೌನವಾಗಿ ಬುಡ್ತ್. ಅವ್ಳಿಗೆ ಅವನ ಮನೆಗೆ ಸೇರ್‍ಸಿಕಂಡ್ ಮತ್ತೆ ಹಳೇ ಕತೆಗ ಮತ್ತೆ ಶುರು ಆದು

ಬೇಕಿತ್ತ್‌ಲೆ. ಆದರೆ, ಮಕ್ಕ ಈಗ ಅಪ್ಪಂಗಾಗಿ ಹಂಬಲಿಸ್‌ತಿದ್ದೊ. ಬೇರೆ ಮಕ್ಕ ತಮ್ಮ ಅಪ್ಪಂದ್ರೊಟ್ಟಿಗೆ ತಿರ್‌ಗ್‌ಕನ ಅವು ಮೌನವಾಗುತಿದ್ದೊ.

ರಮೇಶ ಪೂರ್ತಿ ಮಂಕಾತ್. ಆಸ್ಪತ್ರೆಲಿ ಇದ್ದಷ್ಟ್ ದಿನ ಬೇರೆಯವ್ರಿಂದ ಉಪಚಾರ ಪಡ್ದವಂಗೆ ತನ್ನ ಒಂಟಿತನದ ಬದ್ಕ್‌ನ ಗ್ಯಾನ ಮಾಡಿ ಹೆದ್ರಿಕೆ ಆತ್. ಸುಮ ಮೌನಂದ ಅವನ ಬಟ್ಟೆ ಮತ್ತೆ ಬೇರೆ ಸಾಮಾನ್‌ಗಳ್ನ ತಲೆ ಬಗ್ಗ್‌ಸಿ ಬ್ಯಾಗಿಗೆ ತುಂಬಿಸ್‌ತಿತ್ತ್.

ಇದ್ದಕ್ಕಿದ್ದಂಗೆ ಅವ್ಳ ಕೈಗಳ್ನ ಹಿಡ್ಕಂಡ ರಮೇಶ, "ಪ್ಲೀಸ್, ಸುಮ ಈ ಸಲ ನನ್ನ ಬುಟ್ಟ್ ಹೋದರೆ ನಾನ್ ಖಂಡಿತ ಉಳಿಯಲ್ಲೆ. ಈಗ ನಾನ್ ಹೊಸ ಮನ್ಸನಾಗೋಳೆ. ಇದೊಮ್ಮೆ ಅವಕಾಶ ಕೊಟ್ಟುನೋಡ್ ನಿನ್ನ ನಂಬಿಕೆಗೆ ದ್ರೋಹ ಮಾಡ್ದುಲೆ" ತೇಳಿ ಮರ್‍ಗ್ಡಿಕೆ ಶುರು ಮಾಡ್ತ್.

ಅದೇ ಸಮೆಗೆ ಒಳಗೆ ಬಂದ ಸೋಮಯ್ಯ ಮತ್ತೆ ಜಾನಕಿನವು "ಸುಮ, ನಾವ್ ಎಲ್ಲಾ ಕೇಳ್ಸಿಕಂಡೊ. ಹೆಣ್ಣ್‌ನ ಕ್ಷಮಯಾಧರಿತ್ರಿ ತೇಳ್ವೆ ಅವ್ನ ಕ್ಷಮಿಸಿಬುಡ್ ಮಕ್ಕಳಿಗಾಗಿ ಆದರೂ ನೀವ್ ಒಂದಾಗಿ ಬಾಳ್ದು ವಳ್ಳದ್"ತೇಳ್ದೊ.

ಸುಮ ತಲೆ ಎತ್ತಿ ರಮೇಶನ ನೋಡ್ತ್. ಅಲ್ಲಿ ಅವ್ವನ ಹಂಬಲಿಸುವ ಕೂಸ್‌ನ ದೈನ್ಯತೆ ಇತ್ತ್. ಸುಮ ಸೋಮಯ್ಯನವ್ರ ಹತ್ರ ಹೋಗಿ ಅವ್ರ ಕೆಮಿಲಿ ಮೆಲ್ಲೆ ಎಂತೋ ಹೇಳ್ತ್. ಸೋಮಯ್ಯನವು ಅದ್ಕೆ ತಲೆ ಆಡ್ಸಿದೊ.

ಮಾರನೇ ದಿನ ಹೊತ್ತಾರೆ ಸುಮನ ಕಾದ್‌ಕಂಡ್ ಇದ್ದವಂಗೆ ಬಾಡಿಗೆ ಕಾರ್ ತಕಂಡ್ ಬಂದ ಸೋಮಯ್ಯನವರ್ನ ಕಂಡ್, ಅಂವ ಭೂಮಿಗೆ ಇಳ್ದ್ ಹೋತ್.

"ನಡಿ ರಮೇಶ ಸದ್ಯಕ್ಕೆ ನಮ್ಮ ಮನೆಗೆ ಪೋಯಿ" ತೇಳ್ದೊ ಸೋಮಯ್ಯನವು ಡಿಸ್‌ಜಾರ್ಜ್ ಆದ ಮ್ಯಾಲೆ ಆಸ್ಪತ್ರೆಲಿ ಇರುವಂಗೆ ಇಲ್ಲೆ. ಹಿಂದೆನ ದಿನನೇ ಆಸ್ಪತ್ರೆ ಬಿಲ್ಲ್‌ನ ಸುಮ ಕಟ್ಟಿಹೋಗಿತ್ತ್.

ಒಂದೆರಡ್ ಗಂಟೆ ಪ್ರಯಾಣ ಮಾಡ್ದ ಮ್ಯಾಲೆ ಒಂದ್ ಸಣ್ಣ ಮನೆ ಮುಂದೆ ಟ್ಯಾಕ್ಸಿ ನಿಂತ್ತತ್. ಮೈಯೆಲ್ಲಾ ಹಿಡಿಯಾಗಿ ಇಳ್ದ ರಮೇಶ ಸೋಮಯ್ಯನವ್ರ ಹಿಂದೆ ಹೋತ್,

ಇವು ಬಾಗ್ಲಿಗೆ ಬಂದ್ ಎತ್ತ್‌ಕನ ಬಾಗ್ಲ್ ದೊಡ್ಡದಾಗಿ ತೆರ್‌ದ್‌ಕಣ್ತ್ "ವೆಲ್‌ಕಂ ಹೋಂ ಡ್ಯಾಡಿ" ತೇಳಿ ಮಕ್ಕ ಒಟ್ಟಿಗೆ ಸ್ವಾಗತ ಮಾಡ್ದೊ. ಪೊರ್ಲುಲಿ ಸಿಂಗಾರ ಮಾಡಿಕಂಡಿದ್ದ ಸುಮ ಬಂದ್ ಇವರ್ನ ವಳಗೆ ಬರ ಮಾಡಿ ಕಣ್ತ್.

ಒಂದ್ ಗಳಿಗೆ ಇಬ್ಬರ ಕಣ್ಣ್‌ಗ ಕೂಡ್ದೊ. ಸೋಮಯ್ಯನವು ತಮ್ಮ ಪ್ರಯತ್ನ ಫಲ ಕೊಡ್ತ್ ತೇಳಿ ದೇವ್ರಿಗೆ ಕೈ ಮುಗ್ದ್ ನೆಮ್ಮದಿಲಿ ಉಸ್‌ರ್ ಬುಟ್ಟೊ. ರಮೇಶ– ಸುಮ ಇಬ್ಬರೂ ಸೋಮಯ್ಯನವ್ರ ಕಾಲ್ ಹಿಡ್ದ್ ನಮಸ್ಕಾರ ಮಾಡ್ದೊ. ಅವು ಮನಸಾರೆ 'ಲಾಯ್ಕ ಇರಿ'ತ ಆಶೀರ್ವಾದ ಮಾಡ್ದೊ.

* * * * *

# ಹುಚ್ಚ

**ಕಟ್ರತನ ಲಲಿತಾ ಅಯ್ಯಣ್ಣ**

ಸಾಯಂಕಾಲ ನಾಕ್ ಗಂಟೆ ಆಗಿತ್ತ್ ಶಾಲೆಲಿ ಗಂಟೆ ಹೊಡ್ದಂಗೆ ಎಲ್ಲ ಮಕ್ಕ ಹೊರಗೆ ಬಂದ್ ಅವರವರ ಮನೆಗೆ ಹೊರ್ಟೊ ಒಂದ್ ಮಕ್ಕಳ ಗುಂಪ್ ದಾರಿಲಿ ಹೋಗ್‌ತ್ತಿದ್ದ ಹುಚ್ಚನೊಬ್ಬನ ಹಿಂದೆ ಕುತೂಹಲಂದ ತಿರ್‌ಗ್ತಿತ್ತ್. ಹುಚ್ಚನ ಅತಿರೇಕದ ವರ್ತನೆ ಅವುಕೆ ಕುಶಿ ಕೊಡ್‌ತಿತ್ತ್. ಎಂತೆಂತೊ ಬಡಬಡಿಸಿಕಂಡ್ ಒಮ್ಮೆ ನಡ್ಕಂಡ್ ಒಮ್ಮೆ ಓಡಿಕಂಡ್ ಹೋಗ್‌ವ ಹುಚ್ಚನ ಹಿಂದೆನೇ ಮಕ್ಕ ಹೋಗ್‌ತಿದ್ದೊ.

ಹರ್ದ ಕೊಳಕಾದ ಮಾಸಿದ ಬಟ್ಟೆ, ಹರ್ಡಿದ ತಲೆಕೂದ್ಲ್, ಕಂಕುಳ್‌ಲಿ ಒಂದು ಸಣ್ಣ ಬಟ್ಟೆ ಗಂಟ್ ಆ ಬಟ್ಟೆ ಗಂಟ್‌ನ ತನ್ನ ಸರ್ವಸ್ವ ತೇಂಳ್ವಂಗೆ ಜೋಪಾನಲಿ ಎದೆಗೆ ಒತ್ತಿ ಹಿಡ್ಕಂಡಿತ್ತ್. ಸ್ವಲ್ಪ ದೂರ ನಡ್ದೊ, ಓಡಿಯೋ ಹೋಗಿ ಒಂದ್ ಕಡೆ ಕುದ್ದ್ ಆ ಬಟ್ಟೆ ಗಂಟ್‌ನ ಬಿಚ್ಚಿ ಹುಡ್ಕಿ ಎಂತನೋ ತೆಗ್ದ್ ಕಣ್ಣ್ ಅರಳಿಸಿ ನೋಡ್‌ತಿತ್ತ್. ಕೈಯಿಂದ ಅದ್ನ ಪೂಜಿ ಅದ್ಕೆ ಮುತ್ತ್ ಕೊಟ್ಟ್ ಮತ್ತೆ ಮೊದ್ಲ್‌ನಂಗೆ ಬಟ್ಟೆ ಗಂಟ್‌ಲಿ ಇಸಿಕಂಡ್ ಮತ್ತೆ ನಡಿಯಕೆ ಸುರು ಮಾಡ್‌ತಿತ್ತ್. ಮುಖಲಿ ಎಂತದೋ ಹೆದ್ರಿಕೆ, ಗಾಬರಿ ಎಲ್ಲಾ ಇತ್ತ್.

* * * * *

ಅವಂಗೆ ಬೀದಿಲಿ ಇರ್ವ ನಲ್ಲಿ ನೀರೇ ಪಾನೀಯ. ಕರುಣಾ ಮಯಿಗ ಯಾರಾದರ್ ಕೊಡುವ ತಂಗಳನ್ನನೇ ಭೋಜನ. ಮರದ ಕೆಳಗೋ, ಯಾರೂ ಇಲ್ಲದಿರ್ವ ಪಾಳು ಬಿದ್ದ ಗುಡಿಗಳೊ, ಬಸ್ ಸ್ಟಾಂಡ್‌ಲೊ ಅವನ ವಾಸ. ಅದೇ ಅವನ ಮನೆ ಗೊತ್ತ್ ಗುರಿ ಇಲ್ಲದ ಬಾಳ್. ಹುಚ್ಚಂಗೆಂತ ದಿನಚರಿ!!

ಪಕ್ಕದ ಮೋರಿ ಮ್ಯಾಲೆ ಕುದ್ದ್ ಕಂಡ್ ಇದ್ದಂವ ಇದ್ದಕ್ಕಿದ್ದಂಗೆ ಓಡಿಕೆ ಸುರ್ ಮಾಡ್ತ್. ಅವನ ಹಿಂದೆ ಬರ್ತಿದ್ದ ಮಕ್ಕಳ ಗುಂಪು ಇವನ ಕಂಡ್ ಆಶ್ಚರ್ಯಲಿ ನೋಡ್‌ತಿದ್ದಂಗೆ ಶಾಲೆಂದ ಮನೆಗೆ ಹೊರ್ಟಿದ್ದ ಪೊಲ್ಲುನ ಗೂಡೆನ ಹತ್ರ ಹೋಗಿ "ಶಾಲಿನಿ" ನನ್ನ "ಶಾಲಿನಿ' ಬಾ ಇಲ್ಲಿ ನಾನ್ ಮರ್‌ತ್ ಹೋತಾ. ನನ್ನ ಗೊತ್ತಾಲೆಲೆನ ಬಾ ಮನೆಗೆ ಪೋಯಿ" ಂತ ಅವಳ ಬಾಚಿ ತಬ್ಬಿಕಂತ್.

ಆ ಗೂಡೆ ಹೆದ್ರಿ ಜೋರಾಗಿ ಕಿರ್ಚಿಕನ ಜನ ಗುಡ್ಡೆ ಸೇರ್ದೊ. ಶಾಲೆ ಮಕ್ಕ ಅವಂಗೆ ಕಲ್ಲ್ ಹೊಡ್ದೊ. ಮಣ್ಣ್ ಬಿಸಾಕಿದೊ. ಗೂಡೆ ತಪಿಸಿಕಂಡ್ ಓಡ್ತ್. ಹುಚ್ಚನ ಮೈಯಿಂದ ರಕ್ತ ಸುರಿಯಕೆ ಸುರು ಆತ್. ಅಂವ ಅಲ್ಲಿಂದ ಎಂತದೊ ಹೇಳಿಕಂಡ್ ಓಡಿ ಹೋತ್.

* * * * *

ಚಂಗಪ್ಪ ಮತ್ತೆ ವಿಮಲ ಇವರ್ದ್ ಹೊಟ್ಟೆಗೆ ಬಟ್ಟೆಗೆ ತೊಂದರೆ ಇಲ್ಲೆ ತೇಳ್ವಂತ ಸಂಸಾರ. ಇವರ ಸುಖ ಸಂಸಾರದ ಬಳ್ಳಿಲಿ ಅರಳಿದ ಪೊರ್ಲುನ ಎರಡ್ ಹೂಗ ಸಾಗರ್ ಮತ್ತೆ ಶಾಲಿನಿ. ಸಾಗರ್ ಮತ್ತೆ ಶಾಲಿನಿ ನಡುಲಿ ಎಂಟ್ ವರ್ಷದ ವ್ಯತ್ಯಾಸ ಇತ್ತ್. ಇದ್ದ ನಾಕ್ ಎಕ್ರೆ ಕಾಫಿ ತೋಟನ ಬಾಳಾ ಲಾಯ್ಕ ಇಟ್ಟಿದ್ದೊ. ಚಂಗಪ್ಪನವು. ಅವ್ರ ಬದ್ಕ್‌ಗೆ ದಾರಿ ಕಾಫಿ ತೋಟ, ಸ್ವಲ್ಪ ಗದ್ದೆ ಮಾತ್ರ ಉಂಬಕೆ ಉಡಿಕೆ ಸಾಕಾಗಿತ್ತ್.

ಚಂಗಪ್ಪನವರ ತಮ್ಮ ತಮ್ಮಯ್ಯ ಸಹ ಅವರ ಮನೆನ ಇನ್ನೊಂದ್ ಭಾಗಲಿ ವಾಸವಾಗಿದ್ದೊ. ಅವರ ಅಪ್ಪ ಇಬ್ಬರ್ ಗಂಡ್ ಮಕ್ಕಳಿಗೆ ಒಂದೇ ಮನೆಲಿ ಎರಡ್ ಭಾಗ ಮಾಡಿ ಕೊಟ್ಟದ್ದೊ.. ತಮ್ಮಯ್ಯನವ್ಕ ಇವರಷ್ಟೇ ಆಸ್ತಿ ಇತ್ತ್. ಇಬ್ಬರು ಪಾಲ್ ತಕಂಡ್ ಬೇರೆ ಬೇರೆ ವಾಸಮಾಡ್ತಿದ್ದೊ. ಆದರೆ ಚೆಂಗಪ್ಪನವ್ಕೆ ಅಣ್ಣಂತೇಲ್ವ ಕಾರಣಕ್ಕೆ ತಮ್ಮಂಗಿಂತ ಅರ್ಧ ಎಕ್ರೆ ಜಾಗ ಜಾಸ್ತಿ ಕೊಟ್ಟಿದ್ದೊ. ಇದ್ ತಮ್ಮಯ್ಯನವ್ರ ಅಸಮಾಧಾನಕ್ಕೆ ಕಾರಣ ಆಗಿತ್ತ್. ಮ್ಯಾಲೆ ಎಷ್ಟೇ ಲಾಯ್ಕ ಇದ್ದಂಗೆ ಕಂಡರೂ ಅಣ್ಣನೊಟ್ಟಿಗೆ ಆಗೊಮ್ಮೆ ಈಗೊಮ್ಮ ಜಗಳ ಆಗ್‌ತಿತ್ತ್. ಇದಕ್ಕೆ ತಮ್ಮಯ್ಯನ ಹೆಣ್ಣ್ ಕಮಲ ಕುಮ್ಮಕ್ಕ್ ಕೊಡ್ತಿತ್ತ್.

ವಿಮಲನ ಅಕ್ಕನ ಮಗಳ ಮದ್ವೆ ಇತ್ತ್. ಮ್ಕಕಳಿಗೆ ಇಬ್ಬರಿಗೂ ಪರೀಕ್ಷೆ ಇದ್ರಂದ ಮಕ್ಕಳ್‌ನ ಶಾಲೆಗೆ ಕಳ್ಸಿ ಚಂಗಪ್ಪ ಮತ್ತೆ ವಿಮಲ ಇಬ್ಬರು ಹೋಗಿ ಬಾದುತ ತೀರ್ಮಾನ ಮಾಡ್ದೊ. ಹಂಗೆ ಮಾರನೆ ದಿನ ಹೊತ್ತಾರೆ. ಮಕ್ಕಳ್‌ನ ಶಾಲೆಗೆ ಕಳ್ಸಿ ಬೇಗ ಬಂದು ಬುಟ್ಟವೆತೇಳಿ ಇಬ್ಬರು ಕಾರ್‌ಲಿ ಹೊರ್ಟೊ.

ಮಧ್ಯಾಹ್ನ ಶಾಲೆ ಹಕ್ಕಲೆ ಬಂದ ಸೋದರ ಮಾವ ರಾಮಪ್ಪನ ಕಂಡ್ ಮಕ್ಕಳಿಗೆ ಆಶ್ಚರ್ಯ ಆತ್. ಅವರ ಮುಖ ಬಾಡಿತ್ತ್. ಟೀಚರ್ ಇಬ್ಬರ್ನ ಹೋಗಿತ ಕಳ್ಸಿದೊ. ಇಬ್ಬರಿಗೂ ಏನೋ ಸಂಕಟ ಗಾಬರಿ ಮನೆ ಹತ್ರ ಬಾಕನ ಮನೆ ಮುಂದೆ ಜನ ಸಾಗರನೇ ಸೇರಿದ್ದೊ. ಒಳಗೆ ಬಂದ್ ನೋಡ್ರೆ ಮದ್ವೆಗೆಂತ ಹೋದ ಅಪ್ಪ ಅಮ್ಮ ಹೆಣವಾಗಿ ಮಲ್ಗಿದ್ದೊ. ಹೊತ್ತಾರೆ ಇಬ್ರೂ ಮೊದ್ವೆಗೆಂತ ಹೊರ್ಟೊವು ಆಕ್ಸಿಡೆಂಟ್‌ಲಿ. ಮಸಣ ಸೇರಿದ್ದೊ.

ಮಕ್ಕ ಇಬ್ಬರು ಬುಡ ಕಡ್ದ ಬಾಳೆನಂಗೆ ಅಪ್ಪ ಅಮ್ಮನ ಮೈ ಮೇಲೆ ಬಿದ್ದ್ ಗೋಳಾಡ್ದೊ. ಯಾರು ಸಮಧಾನ ಮಾಡ್ರೂ ಅವರ್ನ ಸಮಧಾನ ಪಡ್ಸಿಕಾತ್ಲೆ. ಚಿಕ್ಕಪ್ಪ ಚಿಕ್ಕವ್ವ ಇಬ್ಬರೂ ಜನರ ಕಣ್ಣ್ ಕಟ್ಟಿಕೆ ನಾವು ಒಳೊ ಅಂತ ಹೇಳಿ ಸಮಾಧಾನ ಹೇಳ್ದೊ. ಬಂದವೆಲ್ಲಾ "ಅಯ್ಯೋ" ಪಾಪ" ತ ಹೇಳಿ –ಹೋಗ್‌ತಿದ್ದೊ.

ಎಲ್ಲಾ ಕಾರ್ಯ ಮುಗಿಯಕೆ ಮುಟ್ಟ ಮಾವ ಇದ್ದ್ ಮಕ್ಕಳ್ನ ಸಮಾಧಾನ ಮಾಡಿ ತಮ್ಮೊಟ್ಟಿಗೆ ಕರ್ಕಂಡ್ ಹೋದೊ. ಸ್ವಲ್ಪನೇ ದಿನಲಿ ಮಾವನ ಮನೆಲಿ ಕತ್ತೆ ಚಾಕರಿ ಅವರ ಪಾಲಿಗೆ ಬಾತ್. ಇವ್ ಶಾಲೆಗೆ ಹೊಗದೆ ಬಾಳ ದಿನಾ ಆಗಿತ್ತ್. ಮಾವ ನಮ್ಮವ ಆದರೂ ಅತ್ತೆ ನಮ್ಮವಳಾ ತೇಳ್ವಂಗೆ ಆಗಿತ್ತ್.

ಸಾಗರ್ ಬಾಳಾ ಸ್ವಾಭಿಮಾನಿಯಾಗಿತ್ತ್ ಅವಂಗೆ ತನ್ನ ಮನೆ ಮತ್ತೆ ಶಾಲೆನ ಗ್ಯಾನ ಬಾಕೆ ಶುರ್ ಆತ್. ಅಂವ ಮಾವಂಗೆ ಹೇಳಿ ಮನೆಗೆ ಬಾಕನ ಆಗಲೇ ಚಿಕ್ಕಪ್ಪ ಆ ಮನೆನ ವಾರಸುದಾರ ಆಗಿ ಮೆರ್ದಿತ್ತ್. ಇವ್ಕೆ ಮಾವನ ಮನೆನ ಅನುಭವನೂ ಇಲ್ಲಿ ಮಾಮೂಲಿ ಆತ್. ತಬ್ಬಲಿ ಮಕ್ಕಳಾದ ಸಾಗರ್ – ಶಾಲಿನಿಯರ್ ಕಷ್ಟ ಪರಂಪರೆನ ಹುಟ್ಟ್ಯನೇ ಪಡ್‌ದ್ ಬಂದಿದ್ರೊ ಏನೋ?!

ಸಾಗರ್–ಶಾಲಿನಿಗೆ ಓದಿಕೆ ದುಡ್ಡಿಗೆ ಕಷ್ಟ ಆತ್ ಸಾಗರ್‌ಗೆ ಶಾಲೆ ಫಿಸ್ ಕಟ್ಟಕೆ ಆಗದೆ ಅವನ ಓದ್ ಇತಿಶ್ರೀ ಆತ್. ಪುಟ್ಟ ಶಾಲಿನಿ ಸಹಾ ಶಾಲೆ ಬಿಡ್ಸಿ ಮನೆ ಕೆಲ್ಸಕೆ ಹಾಕನೊ ತೇಳ್ವ ಚಿಕ್ಕವ್ವನ ಮಾತ್ ಕೇಳಿ ಸಾಗರ್‌ನ ಎಳೆ ಹೃದಯ ರೋಷಂದ ಕುದ್ದ್ ಹೋತ್. ತನ್ನ ಜೀವನ ಮುಡ್ಪಾಗಿಟ್ಟ್ ತನ್ನ ಪ್ರಾಣಪದಕದಂಗೆ ಇರ್ವ ಶಾಲಿನಿನ ಓದ್ಸಿ ಮುಂದೆ ತನ್ನೆತ ಪಣ ತೊಟ್ಟತ್. ಹಂಗೆಂತ ಚಿಕ್ಕನೊಟ್ಟಿಗೆ ಈ ವಿಷ್ಯ ಸಾಯಂಕಾಲ ಹೇಳ್ಕನ ಚಿಕ್ಕಪ್ಪಂಗೆ ಈ ಹೈದನ ಧೈರ್ಯನ ಕಂಡ್ ಆಶ್ಚರ್ಯ ಆದರೂ ಓದ್ಸಿದೆಯಂತೆ ಓದ್ಸಿದೆ. ಎಷ್ಟೇ ಇಟ್ಟುಟು ನಿಮ್ಮ ಅಪ್ಪ. ಇದ್ದದೆಲ್ಲಾ ಅಪ್ಪ, ಅಮ್ಮನ ಸಾವು, ತಿಥಿ ,ಶುದ್ಧಂತೇಳಿ ಖರ್ಚಾತ್. ನಿಮ್ಮ ತಬ್ಬಲಿ ಮಕ್ಕಂತೇಳಿ ನಾಕ್ ತುತ್ತು ಅನ್ನ ಹಾಕಿರೆ ಇವಂಗೆ ಮೈಮೇಲೆಲ್ಲಾ ಸೊಕ್ಕು. ನಿನ್ನ ತಂಗೆನ ಕರ್ಕಂಡ್ ಎಲ್ಲಾರ ಹಾಳಾಗಿ ಹೋಗ್ ಇನ್ನ್ ನಿನ್ನ ಮುಖ ತೋರ್ಸಬಡ" ತೇಳಿ ಗರ್ಜಿಸಿತ್. ನಿ

ಸಾಗರ್‌ಗೆ ಮುಂದೇನ್ ದಾರಿ ಕಾಣದಾತ್ ಮನೆಯವು, ನೆಂಟ್ರಗ ಎಲ್ಲಿ ತಮಗೆ ದೆಶೆ ಬಾದೂತ ಆದಷ್ಟ್ ದೂರ ಇದ್ದೊ. ಆಸ್ತಿ ಮನೆ ಇದ್ದರೂ ಚಿಕ್ಕಪ್ಪನ ದುರಾಸೆಂದ ಗತಿ ಇಲ್ಲದಂಗೆ ಆಗಿ ಬುಟ್ರೊ. ಮಕ್ಕ ಆದರೂ ಹೆಂಗಾರೂ ಬದ್ಕುತ ಹೇಳ್ವ ಛಲ ಸಾಗರ್‌ಗೆ ಮೂಡ್ತ್. ಬೆಳಿಗ್ಗೆ ಎದ್ದ್ ಊರ್‌ನ ಮನೆಮನೆಗೆ ಅಲ್ದ್ ಕೆಲ್ಸ ಕೇಳ್ತ್. ಎಲ್ಲಾ ಮನೆಯವು ಒಂದಲ್ಲ ಇನ್ನೊಂದು ಕಾರಣಕ್ಕೆ ಅವಂಗೆ ಕೆಲ್ಸ ಕೊಡಿಕೆ ಒಪ್ಪಿತ್ಲೆ ಕಡೇಲಿ ಒಂದ್ ಮನೆಯವು ಇವಂಗೆ ಕೆಲ್ಸ ಕೊಡಿಕೆ ಒಪ್ಪಿತ್. ಮನೆ ಕೆಲ್ಸನೂ ಅವನ ಪಾಲಿಗಿತ್ತ್. ತಮ್ಮ ಮನೆಲಿ ಒಂದು ಸಣ್ಣ ಕೋಂಬ್ರೆನ ಸಾಗರ್ ಮತ್ತೆ ಶಾಲಿನಿಗೆ ಬುಟ್ಟ್ ಕೊಟ್ರೊ, ಸಾಗರ್ ಬಾಳಾ ನಿಷ್ಠೆಲಿ ಕೆಲ್ಸ ಮಾಡಿ ಮೆನೆಯವ್ರ ಮೆಚ್ಚಿಗೆ ಗಳ್ಸಿತ್. ಮನೆಯವ್ರ ಇಬ್ಬರ್‌ನ ಪ್ರೀತಿಂದ ನೋಡಿಕೊಂಬತಿದ್ದೊ.

ಶಾಲಿನಿ ಮನೆ ಹತ್ರ ಇರ್ವ ಶಾಲೆಗೆ ಸೀರ್ಸಿತ್. ಸಾಗರ್ ಅವ್ಕೆ ದಿನಾ ತನ್ನ ಗೆಳತಿಗಳೊಟ್ಟಿಗೆ ಶಾಲೆಗೆ ಹೋಗಿ ಬಾತಿತ್ತ್. ಸುಖಲಿ ಬೆಳ್ದಿದ್ದರೂ ಅವ್ರ ಈಗಿನ ಪರಿಸ್ಥಿತಿ ಅವುಕೆ ಹೊಂದಿಕೊಂಡು ಹೋಗ್ವ ಗುಣನ ಕಲ್ಸಿ ಬುಟ್ಟಿತ್ತ್. ಅವ್ಕೆ ಕೆಲ್ಸ ಮಾಡ್ತ ಮನೆಲಿ ಊಟ ಸಿಕ್ಕ್‌ತಿತ್ತ್. ಕೈಗೆ ಸಿಕ್ಕುವ ಸ್ವಲ್ಪ ದುದ್ದ್‌ಲಿ ಪುಸ್ತಕ ಮತ್ತೆ ಬೇರೆ ಖಚಿಗೆ ಹಣ ಕೊಡ್‌ತಿತ್. ಮನೆಯವ್ರ ಮಕ್ಕಳ ಹಳೆ ಪುಸ್ತಕ ಸಿಕ್ಕ್‌ತಿತ್ತ್.

ಇವು ಇದ್ದ ಮನೆನ ಎದ್ರುನ ಮನೆ ಶಾಲಿನಿ ಗೆಳತಿ ಪ್ರೀತಿನ ಮನೆ. ಅ ಪ್ರೀತಿನ ಅಕ್ಕ ಗಾಯತ್ರಿ. ದಿನಾ ಇಬ್ಬರು ಇರ್‍ವ ಮನೆಗೆ ಮಕ್ಕಳೊಟ್ಟಿಗೆ ಆಡಿಕೆ ಬಂದ್ ಹೋಗ್‌ತಿದ್ರೊ. ಹಂಗೆ ಹೋಕನ ಸಾಗರ್‌ನೊಟ್ಟಿಗೆ ಅನುಕಂಪದ ನಾಕ್ ಮಾತಾಡಿ ಹೋಗ್‌ತಿತ್ತ್. ಗಾಯತ್ರಿ ಹಾಂ,ಹೂಂ ದೇ ವಾಲಕ್ತಾಯ ಆಗ್‌ತಿತ್ತ್. ಸಾಗರ್‌ನ ಮಾತ್ ಮಕ್ಕಳಂಗೆ ಇವ್ರ ಮಧ್ಯೆ ಸಲಿಗೆ ಬೆಳ್ದಿತ್ತ್.

ಹಗಲಿಡೀ ದುಡ್ದ್ ದುಡ್ದ್ ಸಾಗರ್‌ಗೆ ಗಾಯತ್ರಿನ ಮುಖ ಕಂಡರೆ ಅವನ ದಣಿವೆಲ್ಲಾ ಮಾಯವಾಗ್‌ತಿತ್ತ್. ಇವರ ಪರ್‍ಚಯದ ರೀತಿ ಬದಲಾಗ್‌ತಿತ್ತ್. ಇವರಿಬ್ಬರ ಪ್ರೇಮವಾಹಿನಿ ಗುಪ್ತವಾಗಿ ಹರಿಯತಿತ್ತ್. ಸಾಗರ್ ಶಾಲಿನಿಯರ್ ಕುಶಿಲಿ ತಮ್ಮ ಕಷ್ಟಗಳ್ನ ಮರ್‍ತ್ತಿದ್ರೊ.

ಮತ್ತೆ ಇವರ ಚಿಕ್ಕಪ್ಪ ಇವರ್‍ನ ಕರ್‍ಯಕೆ ಬಂದಿದ್ರೊ. ಅಣ್ಣನ ಆಸ್ತಿ ನುಂಗಿ ಮಕ್ಕಳೆರಡರ ಬೀದಿಗೆ ಹಾಕಿದತ ಜನ ಹೀಯಾಳ್ಸಿತಿದ್ರೊ. ಅವ್ಕೆ ಪಾಪ ಪ್ರಜ್ಞೆ ಕಾಡಿಕೆ ಶುರು ಆಗಿತ್ತ್. ಆದರೆ ಇವರಿಬ್ಬರೂ ಹೋಕೆ ಒಪ್ಪಿತ್ಲೆ.

ಅಂದ್ ಎಂದ್‌ನಂಗೆ ಶಾಲೆಗೆ ಹೋಗಿದ್ದ ಶಾಲಿನಿ ಸಾಯಂಕಾಲರಾದರೂ ಮನೆಗೆ ಬಾರದೆ ಇರ್ಕನ ಸಾಗರ್‌ಗೆ ಗಾಬರಿ ಆತ್. ಈಗ ಬಾರದೆ ಶಾಲೆಲಿ ಇರ್ದು, ಇಲ್ಲ ಯಾರೋ ಗೆಳತಿ ಮನೆಗೆ ಹೋಗಿರ್ದುಂತ ಎಷ್ಟು ಹೇಳ್ರೂ ಕೇಳದೆ ತಾನೇ ಹುಡ್ಕಿಕಂಡ್ ಹೊರಟತ್. ಎಲ್ಲವೂ ಒಂದೊಂದು ಕಡೆ ಹೊರ್‍ಟೊ. ಗಾಯತ್ರಿ ಸಾಗರ್‌ನೊಟ್ಟಿಗೆ ಹೊರ್‍ಟತ್.

ಎಲ್ಲಿ ಹುಡ್ಕಿರೂ ಶಾಲಿನಿ ಸುಳಿವೇ ಸಿಕ್ಕಿತ್ಲೆ. ದುಖಃ ಬತ್ತದ ತೊರೆಯಾಗಿತ್ತ್. ಶಾಲಿನಿಗಾಗಿ ನಡ್ದ್ ನಡ್ದ್ ಬಳಲಿತ್, ನೆನ್ದ್ ನೆನ್ದ್ ಕೊರ್‍ಗಿತ್, ಅನ್ನ ನೀರ್ ಇಲ್ಲದೆ ಸೊರ್‍ಗಿತ್.

ದಿನಗ ವಾರಗ, ತಿಂಗಳ್‌ಗ ಉರ್‍ಳಿ ಹೋದೊ. ಶಾಲಿನಿನ ಸುಳಿವೇ ಸಿಕ್ಕಿತ್ಲೆ. ಸಾಗರ್ ಅರೆ ಮರುಳ ಆಗಿತ್ತ್. ತನ್ನ ಬಾಳ್‌ನ ಗುರಿಯೋ ಇನ್ನಿಲ್ಲದ ಮ್ಯಾಲೆ ಅವಂಗೆ ಪ್ರಪಂಚನೇ ಬೇಡಾವಾತ್. ಆದರೂ ಪ್ರತಿದಿನನೂ ಕಾದತ್. 'ಹನ್ನೆರಡ್ ವರ್ಷದ ಪುಟ್ಟ ಬಾಲೆ ಏನಾತ್ ತೇಳ್ದು ಬಿಡ್ಸಿಕಾಗದ ಒಗಟಾತ್.

ಸಾಗರ್ ದಾರಿಲಿ ಹೋಗ್ವ ಪ್ರತಿಯೊಂದು ಗೂಡೆಗಳ ಮುಖನ ಪರೀಕ್ಷಿಸಿ ನೋಡ್ತಿತ್ತ್. ನಿಟ್ಟುಸಿರ್ ಬಿಡ್‌ತಿತ್ತ್. ತನ್ನ ದುಖಃದ ಪರಮಾವಧಿಲಿ ಅವಂಗೆ ಸಿಕ್ಕ್‌ತಿದ್ದ ಒಂದೇ ಒಂದ ಉಸಮಾಧಾನ ಮಾತ್ ತೇಳ್ರೆ ಅದ ಗಾಯತ್ರಿದ್ . ಅವ್ಳು ದಿನಾ ಅವಂಗೆ ಅವ್ನ ಕೆಲ್ಸದ ಕಡೆಗೆ ಗಮನ ಹರ್‍ಸಿ ಶಾಲಿನಿನ ಮರವಾಂಗೆ ಮಾಡಿಕೆ ಪ್ರಯತ್ನ ಮಾಡ್‌ತಿತ್ತ್. ಸಾಗರ್ ನಿಧಾನಲಿ ಶಾಲಿನಿನ ಮರ್‍ಯಕೆ ಶುರು ಮಾಡ್ತ್. ಅವ್ಳ ಮರ್‍ತ್ ಅವನ ಮಾಮೂಲಿ ಕೆಲ್ಸಲಿ ತೊಡ್ಗಿಕೆ ಅವಂಗೆ ಬಾಳಾ ತಿಂಗಳ್‌ಗಳೆ ಬೇಕಾತ್.

ಸಾಗರ್‌ಗೆ ಎಂತದೋ ಕಳವಳ ಕಾತರ. ಗಾಯತ್ರಿನ ನೋಡದೆ ಸುಮಾರ್ ದಿನ ಆಗಿತ್. ದಿನಾ ಬರ್ತಿದ್ದವಳಿಗೆ ಎಂತಾತೋತ ಒಂದ್ ಕಡೆ ಹೆದ್ರಿಕೆ ಕಡೆಗೆ ಒಂದ್ ದಿನ ಚಪ್ಪೆ ಮುಖ ಹಾಕಿಕಂಡ್ ಗಾಯತ್ರಿ ಬಾತ್. ಮಾತ್‌ಲಿ ಆಸಕ್ತಿ ಇಲ್ಲೆ. ಮೊದ್ಲಿನ ಸಲಿಗೆ ಇಲ್ಲೆ. ಸಾಗರ್‌ನ ಕಂಡ್ ಬಿಕ್ಕಿ ಬಿಕ್ಕಿ ಮರ್ರ್ಬತ್ ಮರ್ಬ್ಬಂಡೇ ತನಿಗೆ ಮದ್ವೆ ನಿಶ್ಚಯ ಆದ ವಿಷ್ಯನ ತಿಳ್ಸಕನ ಸಾಗರಂಗೆ ಆಘಾತ ಆತ್. ತನಿಗೆ ಇದ್ದ ಒಂದೇ ಒಂದು ಆತ್ಮೀಯ ಭಾಂದವ್ಯ ಇನ್ನಿಲ್ಲೆಂತ ದುರ್ಬಿಸಿತ್. ಅಂವ ಎಷ್ಟ್ ಹೊತ್ತ್ ಹಾಗೇ ಮರ್ಗ್ಬಕಂಟ್ ಕುದ್ದಿತ್ತೋ ಅಂವಂಗೆ ಎಚ್ಚರ ಆಕನ ಗಾಯತ್ರಿ ಇತ್ಲೆ ಸುತ್ತಲೂ ಕತ್ಲೆ ಆಗಿತ್.

ಮಾರನೇ ದಿನ ಸಾಗರ್ ಕಾಂಬಲೆ ತೇಲ್ವ ಸುದ್ದಿ ಎಲ್ಲ ಕಡೆ ಹಬ್ಬಿತ್

* * * * * * * *

ನಮಸ್ತೇ ಡಾಕ್ಟರ್

"ನಮಸೆ ಬನ್ನಿ ಎಂತ ಆಕಾಯ್ತ್"

" ಡಾಕ್ತ್ರೆ ನಾನ್ ಕೃಷ್ಣಪ್ಪತ ಲಾಯರ್ ನಮ್ಮ ಕಡೆಂದ್ ಒಂದು ಪೇಷಂಟ್ ಕರ್ಕಂಡ್ ಬಂದೊಳೆ .ಸ್ವಲ್ಪ ಎಮರ್ಜನ್ಸಿ ಕೇಸ್, ಸ್ವಲ್ಪ ಬೇಗ ನೋಡಕಾಗಿತ್.

" ಆಗಲಿ ಈಗಲೇ ಬನ್ನೆ" ತ ಡಾಕ್ಟರ್ ಹೊರ್ಬ್ ಬಂದೊ.

ಸಣ್ಣ ಗೂಡೆ ಸೊಯೆ ಇಲಲದೆ ಮಲ್ಗಿತ್. ಮಡಿಯಾಗಿದ್ದ ಬಟ್ಟೆ ನಾಕೈದ್ ಕಡೆ ಹರ್ದಿತ್. ಗೂಡೆನ ಮ್ಯಾಲೆ ಆಘಾತ ಆಗಿಟು ತೇಳಿಕಂಡ್ ಡಾಕ್ಟರ್ ತಕ್ಷಣ ಚಿಕಿತ್ಸೆ ಆರಂಭಿಸಿದೊ

"ನೋಡ ಈ ಗೂಡೆ ನಿಮಗೆ ಏನಾಕು?

"ಈ ಗೂಡೆ ಯಾರ್‌ಂತ ಗೊತ್ತಿಲ್ಲೆ.

"ಈ ಗೂಡೆ ಯಾರ್ ಗೊತ್ತಿಲ್ಲೆ. ಡಾಕಟ್ರೆ. ಸಾವ್ ಕಾರ್‌ಲಿ ಬಾಕೆಕನ ಪ್ಪಕದ ಹಳ್ಳಿಂದ ಸ್ವಲ್ಪ ದೂರಲಿ ಯಾರೂ ಇಲ್ಲದ ನಿರ್ಜನ ಜಾಗೆಲಿ ಹೀ<ಗೆ ಬಿದ್ದತ್. ಸಂಶಯ ಬಂದ್ ಹೋಗಿ ನೋಡ್ರೆ ಸೊಯೆನೇ ಇತ್ತ್‌ಲೆ ಹಾಂಗೆ ಆಸ್ಪತ್ರೆಗೆ ಕರ್ಕಂಡ್ ಬಂದೆ" "ಸರಿ ವಳ್ಳದಾತ್ ಅಮದಂಗೆ ಇವಳ ನೀವೇ ನೋಡ್ಕಂಡ್ರೆ ಹೇಂಗೆ?" ಇರಲಿ ಡಾಕ್ತ್ರೆ ಎಷ್ಟ್ ಖಚಾದರೂ ಬೇಜಾರ್ ಇಲ್ಲೆ. ಬೇಗ ಉಸಾರ ಆದ್ರೆ ಸಾಕ್. ಆ ಗೂಡೆನ ಕಂಡರೆ ಎಂತದೋ ಒಂತರ ಮಮತೆ ಹುಟ್ಟಿದೆ. ಮಕ್ಕ ಇಲ್ಲದ ನಂಗೆ ದೇವರೇ ಇವಳ್ನ ಕೊಟ್ಟಾತ ತಿಳ್ದವೆ"

"ತುಂಬಾ ಸಂತೋಷ ಈ ಕಾಲಲಿ ನಿಮ್ಮಂತವು ಇರ್ದು ಅಪರೂಪ. ಗೂಡೆಗೆ ಸೊಯೆ ಬಂದ ಮೇಲೆ ವಿಚಾರ್ಸನ"

"ಹಾಂಗೇ ಆಗಲಿ ಡಾಕ್ತ್ರೇ"

ಇವರ ಮಾತ್ ಸಾಗ್ತಿದ್ದಂಗೆ ಮಲ್ಗಿದ ಗೂಡೆ ,ಮಿಸುಕಾಡಿ ನರಳಿಕಂಡ್ ಕಣ್ಣ್ ತೆರ್ತ್"

"ನೀರೂ_." ನರ್ಸ್ ಬಂದ್ ನೀರ್ ಕುಡ್ಸಿತ್.

"ನಿನ್ನ ಹೆಸ್ರೆಂತಮ್ಮ"

ಗೂಡೆ ಗೊತ್ತಿಲ್ಲೆಂತ ತಲೆ ಆಡ್ಸಿತ್ ಕಣ್ಣ್ ಪಿಳಿಪಿಳಿ ಬುಟ್ಟ್

"ನಿನ್ನ ಮನೆ ಎಲ್ಲಿ"

"ಗೊತ್ತಿಲ್ಲೆ."

"ನೀನ್ ಶಾಲೆಗೆ ಹೋಗ್ತಾವಳಾ ಯಾವ ಸ್ಕೂಲ್"

"ಗೊತ್ತ್‌ಲೆ"

" ಗೊತ್ತ್ಲ ಗೊತ್ತ್‌ಲೆ. ಮತ್ತೆಂತಮ್ಮ ಗೊತ್ತ್. ನಂಗೆ ಒಂದೂ ಗ್ಯಾನ ಇಲ್ಲೆ'

" ಯಾಮ್ ವೆರಿ ಸಾರಿ ಸಾರ್ ಆ ಗೂಡೆಗೆ ಬಹುಶಃ ಹಿಂದೆದ್ ಎಲ್ಲಾ ಮರ್ತ್ ಹೋಗುಟುತ ಕಂಡದೆ. ಅವ್ಳ ಮೆದುಳಿಗೆ ಆಗಿರ್‍ವ ಶಾಕ್‌ಂದ ಅವ್ಳ ನೆನಪ್‌ನ ಶಕ್ತಿ ಹೋದ ಕಾರಣ ಇದ್ ನೀವ್ಗೆ ಸಹಾಯ ಆದು.

***

ರಮ್ಯ ತನ್ನ ಗೆಳತಿಯೊಟ್ಟಿಗೆ ಶಾಲೆಂದ ವಾಪಾಸ್ ಬರ್‍ತಾ ಇತ್ತ್. ಗೂಡೆಗಳ ಕೈಲಿದ್ದ ಕಡ್ಲೆ ಕಾಯಿ ಅವರ ಸಂತೋಷನ ಎರಡ್ ಪಟ್ಟ್ ಮಾಡಿತ್. ಆಗ ಇದ್ದಕ್ಕಿದ್ದಂಗೆ ಹುಚ್ಚನೊಬ್ಬ ಇವರ ಹತ್ರ ಬಾಕನ ಎಲ್ಲವ್ಕೂ ಬಾಳ ಗಾಬರಿ ಆತ್. ಇವರ ಮುಖಗಳ್ನೇ ಅಂವ ದಿಟ್ಟಿಸಿ ನೊಡಿ ಎಂತನೋ ಗೊಣಗ್‌ತಿತ್ತ್. ರಮ್ಯಂಗೆ ನಗೆ ತಡಿಯಕೆ ಆಗದೆ.

"ನೋಡ್ ಜಯ ಅದೆಂತೋ 'ಶಾಲಿನಿ' 'ಶಾಲಿನಿ' ತ ಹೇಳ್ದೆ ಹುಚ್ಚಂಗೂ ಲವ್ವರ್ ಉಟ್ಟುತಕಂಡದೆತೇಳಿ ನಗಾಡಿ ಅವನ ಕಡೆಗೆ ಕಡ್ಲೆ ಕಾಯಿನ ಬಿಸಾಕಿತ್. ಅಷ್ಟೊತ್ತಿಗೆ ಅಲ್ಲಿಗೆ ಬಂದ ಅಪ್ಪನ ಕಾರ್ ಹತ್ತಿ ಹೊರ್ಟ್ ಹೋತ್.

* * * * *

ಮದುವೆ ಮನೆ ತುಂಬಿ ತುಳುಕ್‌ತಿತ್ತ್ ಕೃಷ್ಣಪ್ಪನವು ತಮ್ಮ ಸಾಕು ಮಗಳ್ ರಮ್ಯನ ಮದ್ವೆ ಗೌಜಿಲಿ ಮಾಡಿಕೆ ತಯಾರಿ ನಡ್ಸಿದ್ದೊ. ತಮ್ಮ ತಂಗೆ ಮಂಜ್ಞ ಶ್ರೀಹರಿ ಮದ್ವೆ ಗಂಡ್ ಆಗಿದ್ರಂದ ಅವ್ಕೆ ಹೆಚ್ಚ್ ಕುಶಿ ಆಗಿತ್ತ್. ಮದ್ವೆ ಕಾರ್‌ಬಾರೆಲ್ಲಾ ಮುಗ್ಸಿ ಹೆಣ್ಣ್ ಇಳ್ಸುವ ಕಾರ್ಯ ಬಾಕಿ ಇತ್ತ್. ಮದ್ವೆ ಬಾಳಾ ಲಾಯ್ಕ ಆತ್‌ತ ಎಲ್ಲವೂ ಹೊಗ್ಳಿಕಂಡ್ ಹೋದ್ದೊ. ಅಷ್ಟೊತ್ತಿಗೆ ಮದ್ವೆ ಮನೆಲಿ ಗಲಾಟೆ ಶುರು ಆತ್

ಇದ್ದಕ್ಕಿದ್ದ ಹಾಂಗೆ ಹುಚ್ಚನೊಬ್ಬ ಮದ್ವೆ ಮನೆಗೆ ನುಗ್ಗಿತ್ತ್. ಯಾರ್ ಎಷ್ಟ್ ತಡ್ದರೂ ಭೀಮನ ಬಲದವನಾಂಗೆ ನುಗ್ಗಿ ಬಾತಿತ್ತ್. ಅಷ್ಟ್ ಆಕನ ಎಲ್ಲಾ ಗುಡ್ಡೆ ಸೇರ್‍ದೊ.

ಕೆಲವು ಜನ ಕಲ್ಲ್ ಎಸ್ದೊ ಇನ್ಯಾರೋ ನಾಯಿನ ಬುಟ್ಟೊ. ಹುಚ್ಚನ ಮೈಯಿಂದ್ ರಕ್ತದ ಹೊಳೆ ಹರ್ತ್.

ಅಷ್ಟೊತ್ತಿಗೆ ಅಲ್ಲಿಗೆ ಬಂದ ಕೃಷ್ಣಪ್ಪನವು ಎಲ್ಲರ್ನ ತಡ್ದ್ ಅವಂಗೆ ಕರ್ಕೊಂಡ್ ಹೋಗಿ ಊಟ ಹಾಕ್ಸಿಂತ ಹೇಳ್ದೊ. ಆದರೆ ಅವನ ಸ್ವರ 'ಶಾಲಿನಿ' ' ಶಾಲಿನಿ' ಆಗಿತ್ತ್ . ಎಲ್ಲವೂ ನೋಡುತಿರ್ಕನ ಕುತೂಹಲ ತಡಿಯಕೆ ಆಗದೆ ಮದುಮಗಳು ರಮ್ಯ ಅಲ್ಲಿಗೆ ಬಾತ್ ಹುಚ್ಚನ ಕೈಲಿ ಒಂದು  ಹಳೆದಾದ ಫೋಟೋ ಇತ್ತ್. ಅದ್ ಗೂಡೆನ ಪೋಟೋ ಅದನ್ನ ಅಂವ ಗಟ್ಟಿಯಾಗಿ ಹಿಡ್ಕಂಡಿತ್ತ್. ಬಟ್ಟೆನ ಸಣ್ಣ ಗಂಟ್‌ಲಿ ಸ್ವಲ್ಪ ಸಣ್ಣ ಕೂಸುನ ಬಟ್ಟೆಗ ಇದ್ದೊ. ಬಾಯಿಂದ 'ಶಾಲಿನಿ' ಶಾಲಿನಿ' ತೇಳ್ವ ಹೆಸ್ರ್ ಮಾತ್ರ ಕೇಳ್ತಿತ್ತ್.

ರಮ್ಯ ಅಂವನ ಕೈಲಿದ್ದ ಫೋಟೋ ಬಟ್ಟೆ ಎಲ್ಲ ನೋಡ್‌ತ್ತಿದ್ದಂಗೆ ಹಂಗೇ ನಿತ್ತ್ ಬುಡ್ತ್.

'ಶಾಲಿನಿ.....' ಎಲ್ಲೋ ಯಾರೋ ಕರ್ದಂಗೆ ಆಗ್‌ತ್ತಿತ್ತ್. ಅವ್ಳು ಬಟ್ಟೆಗಳ್ನ ಮುಟ್ಟಿ ನೋಡ್ತ್. ಅವ್ಳಿಗೆ ಮಸ್ಕ್ ಮಸ್ಕ್ ಆಗಿ ಅವ್ಳ ಕಣ್ಣ್ ಮುಂದೆ ತೇಲಿ ಹೋತ್ ನೆನಪುಗ.

"ಅಣ್ಣಾ ___.. " ತೇಳಿ ಕಿರ್ಚಿ ರಮ್ಯ ಹುಚ್ಚನ ಮ್ಯಾಲೆ ಬಿತ್. "ಶಾಲಿನಿ.. ಶಾಲಿನಿ" ತ ಹುಚ್ಚ ಅವಳ್ನ ಜೋರಾಗಿ ತಬ್ಬಿಕಣ್ತ್. ಎಲ್ಲವೂ ಆಶ್ಚರ್ಯಲಿ ಮೂಕರಾಗಿ  ಏನೂ ಅರ್ಥವಾಗದಾಂಗೆ ನೋಡ್‌ತಿರ್ಕನ ರಮ್ಯನ ನೆನಪ್‌ನ ಶಕ್ತಿ ವಾಪಾಸ್ ಬಾತ್. ಅವ್ಳು ಸಾಗರ್‌ನ ಗುರುತಿಸಿತ್.

ಪರಿಸ್ಥಿತಿನ ಅರ್ತ್‌ಕಂಡ್ ಕೃಷ್ಣಪ್ಪನವು ಅವರ್ನ ಸಮಾಧಾನ ಪಡ್ಸಿದೊ. ಹುಚ್ಚನ ಮುಖಲಿ ತೃಪ್ತಿ ತುಂಬಿತ್ತ್. ಮುಖಲಿ ಮಾಸದ ನಗೆ ಮೂಡಿತ್ತ್. ಇದ್‌ಕ್ಕಾಗಿಯೇ ಇಷ್ಟರವರೆಗೆ ಕಾದಿದ್ದಂಗೆ ಜನರ ದಾಳಿಗೆ ಸಿಕ್ಕಿ ಜರ್ಝರಿತವಾಗಿದ್ದ ಅವನ ಶರೀರದ ಪ್ರಾಣ ಪಕ್ಷಿ ಹಾರಿ ಹೋಕೆ ತಯಾರಿ ನಡ್ಸಿತ್. 'ಶಾಲಿನಿ ಲಾಯ್ಕ್ ಇರ್ ತೇಳ್ವಂಗೆ ಅಂವ ಎತ್ತಿದ  ಕೈ ದಫ್‌ತ ಕೆಳಗೆ ಬೀತ್. ಅಣ್ಣನ ಮ್ಯಾಲೆ ಬಿದ್ದ್ ಮರ್ಗ್ ತಿದ್ದ ರಮ್ಯನ ಎತ್ತಿ ಆಸರೆಯಾಗಿ ನಾನೊಳೆ ತೇಳುವಾಂಗೆ ಶ್ರೀಹರಿ ತನ್ನ ಎದೆಗೆ ವರ್ಗಿಸಿಕಂಡ್ ಅವಳ್ನ ಸಮಾಧಾನ ಮಾಡ್ತ್

* * * *

# ಬಿಕ್ಷೆ

– ಉದಯ ಕುಮಾರಿ ಚೆಂಬು

ಅಂದೊಂದ್ ದಿನ ಪಿಕ್ಚರ್ ಮುಗ್ಸಿ ಟ್ಯಾಕಿಸ್‌ನಿಂದ ಹೊರೆಗೆ ಬಾಕನ ಜಿಡಿಕುಟ್ಟಿ ಮಳೆ ಹೊಯೆತಿತ್ತ್. "ಏನ್ ಅಲ್ಸ್‌ತ ಒಳರಿ?.. ಓ ನಾ ಕತೆ ಹೇಳಿನೆತ ನ! ದೊಡ್ಡ ಕತೆ ಹೇಳಿ ನಿಮ್ಮ ತಲೆನ ನಾ ಯಾಕೆ ಕೆಡ್ಸುದು ಹೇಳಿ? ಹಂಗೆ ಸುಮ್ಮನೆ ಸಣ್ಣ ಕತೆ ಅಷ್ಟೇ.

ನಾ ಮನೆಗೆ ಹೋಕುತಾದರೆ ಬಸ್ಸ್‌ಲೇ ಹೋಕಷ್ಟೇ ಹಂಗೆ ಬಸ್ಸ್ ಪಾರ ಕಾದ್ ಕುದ್ದಿದೆ. ಅಷ್ಟ್ ಹೊತ್ತ್‌ಲಿ ಒಬ್ಬ ಬಿಕ್ಷೆ ಬೇಡಂವ ಬಿಕ್ಷೆ ಬೇಡಿ ಬೇಡಿ ಬೊಚ್ಚಿ ಹೋದವನ ಹಂಗೆ ನನ್ನ ಕಣ್ಣ್‌ಗೆ ಕಂಡತ್. ಅವನ ಪ್ರಾಯ ಅಷ್ಟೇನ್ ಕಡ್ಮೆ ಇತ್ಲೆ. ಪ್ರಾಯ ಆದರು ಅವನ ಹೊಟ್ಟೆ ಕೇಳ್ದನ? ಬಿಕ್ಷೆ ಬೇಡದೆ ಅವಂಗೆ ಉಪಾಯ ಇಲ್ಲೆ. ಅಂವ ಅಂದ್ ಯಾರ ಅಭಿಮಾನಿ ತ ನಂಗೆ ಗೊತ್ಲೆ. ಈಗ ಮಾತ್ರ ಡಾ। ರಾಜ್ ಕುಮಾರ್ ಅಭಿಮಾನಿತ ನಿಗಂಟ್ ಆತ್. "ಆಗದು ಎಂದು ಕೈಲಾಗದು ಎಂದು ಕೈಕಟ್ಟಿ ಕುಳಿತರೆ ಸಾಗದು ಕೆಲಸವು ಮುಂದೆ"ತ ಹೇಳಿಕಂಡ್ ಮೆಲ್ಲ ಎದ್ದ್ ಹೋಗಿ ಬಿಕ್ಷೆ ಬೇಡಿಕೆ ಸುರ್ ಮಾಡ್ತ್.

ಅಲ್ಲೆ ಹಕ್ಕಲೆ ಲಾಟ್ರಿ ಟಿಕೇಟ್ ಮಾರುವ ಕಾರ್‌ನ ಒಳಗೆಂದ "ಯಾರಿಗುಂಟು ಯಾರಿಗಿಲ್ಲ ಬಂಪರ್ ಅವಕಾಶ ಇಂದು ಬಿಕ್ಷಾಧಿಪತಿ ಆದವನು ನಾಳೆ ಕೋಟ್ಯಾಧಿಪತಿ"ತ ಹೇಳ್ದು ಕೇಳ್ತಿತ್ತ್. ಇದರ ಮಾತ್ ಕೇಳಿ ಬಿಕ್ಷೆ ಬೇಡವನ ಮನ್ಸ್‌ಗೆ ಏನಾತ್‌ತ ನಂಗೆ ಗೊತ್ಲೆ. ಬಿಕ್ಷೆ ಬೇಡಂವ ಒಂದ್ ಲಾಟ್ರಿ ಟಿಕೇಟ್ ತಕಣ್ತ್. ಲಾಟ್ರಿ ಯಾಗ ಮೊಗ್ದದೆತ ಪಾರ ಕಾದ್ ಕುದ್ದಿರೊಕು. ನೋಡಿ ಆಶ್ಚರ್ಯ! ಆ ಲಾಟ್ರಿ ಬಿಕ್ಷೆ ಬೇಡವಂಗೆ ಮೊಗ್ತ್. ಈ ಸುದ್ದಿನ ಕೇಳ್ದ ಕೂಡ್ಲೆ ಸತ್ತ ದನಕೆ ಕಕ್ಕೆಗ ಸೇರ್ದ ಹಂಗೆ ಇಡೀ ಚಾನಲ್‌ನವು ಈ ಬಿಕ್ಷೆ ಬೇಡವನ ಸುತ್ತ್ ಮುತ್ತ್ ಸೇರ್ದ. ನಂಗೆ ಒಂದ್ ಆಸೆ ಇತ್ತ್. ಬಿಕ್ಷೆ ಬೇಡವನ ಹಕ್ಕಲೆ ಇವು ಎಂತ ಪ್ರಶ್ನೆ ಕೇಳುವೆತ. ಒಬ್ಬಬ್ಬೊನೆ ಒಂದೊಂದ್ ಪ್ರಶ್ನೆ ಕೇಳಿಕೆ ಸುರು ಮಾಡ್ದ. ಅವರ್ಲಿ ಒಬ್ಬ ಕೇಳ್ದ "ಈ ಒಂದ್ ಕೋಟಿ ದುಡ್ಡುನ ಎಂತ ಮಾಡಿರೆ"ತ ಆಗ ಬಿಕ್ಷೆ ಬೇಡಂವ "ಅಯ್ಯೋ ಅಪ್ಪ ಬಿಕ್ಷೆ ಬೇಡಿಕೆ ನಡ್ದ್ ನಡ್ದ್ ಬೊಚ್ಚಿ ಹೋತ್ ಈ ದುಡ್ಡ್‌ಲಿ ಒಂದ್ ಕಾರ್ ತಕಂಡ್ ಕಾರ್‌ಲೇ ಬಿಕ್ಷೆ ಬೇಡಿಕೆ ಹೋನೆ"ತ ಹೇಳ್ತ್. ಬಿಕ್ಷೆ ಬೇಡವನ ಉತ್ತರ ಕೇಳಿ ಮತ್ತೆ ಯಾವ ಚಾನಲ್‌ನವರ ಬಾಯಿಲಿ ಯಾವ ಪ್ರಶ್ನೆ ಉಟ್ಟು ಹೇಳಿ? ಹಂಗೆ ಉಟ್ಟು ನೋಡಿ ಬಿಕ್ಷೆ ಬೇಡವನ ಉತ್ತರ! ಬೇರೆಯವರ ಮನೆಲಿ ಬಂಗ ಬಂದ್ ಕೆಲ್ಸ ಮಾಡಿ ಬೊಚ್ಚ್‌ಕನ ಬಿಕ್ಷೆ ಬೇಡ್ದೇ ಒಳ್ಳದ್‌ತ ಕೆಲವರ ಬಾಯಿಲಿ ಬಂದದೆ.

ಅಂದರೆ ಅದರ ಅರ್ಥ ಬಿಕ್ಷೆ ಬೇಡ್ದು ಸುಲ್ಬದ ಕೆಲ್ಸತ. ಬಿಕ್ಷೆ ಬೇಡ್ದು ಸುಲ್ಬದ ಕೆಲ್ಸ ಅಲ್ಲ. ಬಿಕ್ಷೆ ಬೇಡೊಕ್ಕೆ ಮಾನಸಿಕ ಶ್ರಮ ದೈಹಿಕ ಶ್ರಮದ ಅಗತ್ಯ ಇಲ್ಲದಿರ್ದೆ ಬಿಕ್ಷೆ ಬೇಡವನ ಆಕರ್ಷಣೆಗೆ ಕಾರಣ ಆದೆ. ಬಿಕ್ಷೆ ಬೇಡಿ ಬೊದ್ಕುತ ಯಾವ ದರ್ಮ ಕೂಡ ಹೇಳ್ತ್‌ಲೆ ಹೇಳಿರೆ ಅದ್ ಅದರ್ಮ ಆದೆ. ಹಂಗೆ ಬಿಕ್ಷೆ ಬೇಡಂವ ಮಾತ್ರ ಬಿಕ್ಷೆ ಬೇಡ್ದುಲೆ.

ಬಿಕ್ಷೆನ ಇನ್ನೊಂದ್ ಮೋರೆ ಉಟ್ಟ್, ಹೇಳ್ನೆ ಕೇಳಿ. ಬಿಪಿಎಲ್ ಇದರ ಕತೆ ಇಷ್ಟೆ. ಪ್ರಸ್ನೆ ಕೇಳಿರೆನ? ಇದ್ ಪ್ರಸ್ನೆನೆ ಅಲ್ಲ. ಸೀರೆ ಉಡುವ ಜಾಗೆಲಿ ಪ್ಯಾಂಟ್ ಶರ್ಟ್ ಇದ್ದ ಹಂಗೆ.

ತುಂಬ ಬಡತನಲಿ ಇರೊವ್ಕೆ ಬಿಪಿಎಲ್ ಆದರೆ ಈಗ ಹಂಗಾತ್ಲೆ., ಹಂಞ ಮೊನ್ನರ ಬುಟ್ಟರೆ ಒಳ್ದವು ಎಲ್ಲ ಬಿಪಿಎಲ್. ಬೇಕಷ್ಟ್ ಜಾಗೆ ಜಮ್ಮ ಇದ್ದರು ಅವರ ಆಸೆನ ಬೆಟ್ಟದಷ್ಟ್ ಹೊತ್ತ್‌ಕಂಡ್ ನಾವೌ ಯಾಕೆ ಸುಮ್ಮನೆ ಇರ್ದುತ ನೋಟ್‌ನ ಬಿಕ್ಷೆ ಕೊಟ್ಟ್ ಕಾರ್ಡ್‌ನ ಬಿಕ್ಷೆ ತಕಂಡವೆ. ಹಂಗೆ ಹೇಳಿಕೆ ಹೋದರೆ ಇನ್ನೊಂದ್ ಬಿಕ್ಷೆ ರಾಜಕೀಯ. ಲಂಚಲಿ ಮುಳ್ಗಿ ಹೋದವೆ. ಇದ್ದ ಮರ್ಳ್ ಗಾಡಿನ ಓಯಸಿಸ್ ಇದ್ದ ಹಂಗೆ. ಕೆಲವೌ ಮೊನ್ನರ ಬುಟ್ಟರೆ ಒಳ್ದವೌ ಏನ್ ಗೊತ್ತಿಲ್ಲದವರ ಹಂಗೆ ಜೋಬುಗೆ ಹಾಕಂಡವೆ. ಅದರ ಒಟ್ಟಿಗೆ ಬಡ್ಡಿಗೆ ದುಡ್ಡ್ ಕೊಡ್ದು ಬೊಡ್ಡಿಗೆ ದುಡ್ಡ್ ಜೊಟ್ಟ್ ತಕಂಡವ್ಕೆ ಕೊಡಿಕೆ ದುಡ್ಡ್ ಇಲ್ಲದೆ ಕಣ್ಣ್ ತೊಪ್ಪಿಸಿ ಕಂಡವೆ. ಇದ್ ಒಂದ್ ಬಿಕ್ಷೆನೆ ಆದೆ. ಇದ್ ಗಂಡ್‌ಗಳ ಮೋರೆಲಿ ಗಡ್ಡ ಬೆಳ್ದ ಹಂಗೆ ಬೊಡ್ಡಿ ಬೆಳ್ಕಂಡ್ ಹೋದೆ.ಈ ರಾಜಕಿಯಲಿ ಲಂಚತ ಹೇಳುವ ಬಿಕ್ಷೆ ಓಟ್‌ನ ಸಮಯಲಿ ಜಾಸ್ತಿ ಆಗ್ತಾ ಉಟ್ಟು. ನಾವೆ ಗೆಲ್ಲೊಕುತ ತರ ತರದ ಊಟ ಬಟ್ಟೆ ಬೊರಿ ಕಾಲೇಜ್ ಮಕ್ಕಳಿಗೆ ವಾಚ್ ಕೂಡ ಕೊಟ್ಟವೆ. ಮುಂದೆನ ದಿನಲಿ ತಾಳಿ ಕೂಡ ಬಿಕ್ಷೆನ ರೂಪಲಿ ಕೊಟ್ಟವೆನ ಏನೊ. ಹಂಗೆ ಆಲ್ಸಿ ನೋಡಿರೆ ಸುಮಾರ್ ವರ್ಸಗಳ ಹಿಂದೆ ನನ್ನ ಅಪ್ಪ ಹೇಳ್ದ ಒಂದ್ಕತೆ ನೆನ್ಪಾದೆ.

ಅಯ್ಯೋ.. ದೇವ್ರೆ ಇದ್ ಯಾಕೆ ಹಿಂಗೆ ಹೇಳ್ದೆತ ತಿಳ್ಕಂಡರೆನ? ಇದರ ಹೇಳಿಯೇ ಹೇಳೊಕು. ಒಂದ್ ಊರ್‍ಲಿ ಕಣ್ಣ್ ಕಾಣದ ಮತ್ತೆ ಬಾಯಿ ಬರದ ಪ್ರಾಯಸ್ಥರ್ ಇಬ್ಬೊರ್ ದಾರಿ ತೊಪ್ಪಿ ಬಂದಿದ್ದ ಗಡ ಆ ಪ್ರಾಯಸ್ಥರ್ ಒಬ್ಬನ ಒಟ್ಟಿಗೆ ಕೇಳ್ದ ಗಡ ನಾವು ದಾರಿ ತೊಪ್ಪಿ ಬಂದದ್ ಒಮ್ಮೆ ನಾವ್ಗೆ ದಾರಿ ತೋರ್‍ಸಿ ಕೊಡಿ ತ.

ಆ ಮೊನ್ನ ಏನ್ ಮಾಡ್ತ್ ಗೊತ್ತುಟ! ಇವೌ ಕಾಡ್‌ಲಿ ತಿರ್ಗಲಿತ ಸುಳ್ಳ್ ದಾರಿ ಹೇಳ್ತ್ ಗಡ. ಸತ್ಯ ನಂಬಿದ ಪ್ರಾಯಸ್ಥರ್ ಕಾಡ್ ಬಲ್ಲೆಲಿ ಹಂಞ ದೂರ ನಡ್ದ್ ಆಕನ ಅವ್ಕೆ ಗೊತ್ತಾತ್ ನಾವ್ಗೆ ಮೋಸ ಮಾಡ್ತ್‌ತ. ಆ ಪ್ರಾಯಸ್ಥರ್ ತಿರ್ಗಿ ಬಂದ್ ಆ ಮೊನ್ನಂಗೆ ಬಿಕ್ಷೆ ಕೊಟ್ಟ ಗಡ. ನಿಂಗೆ ಹುಟ್ಟುವ ಮಕ್ಕ ನಮ್ಮ ಹಂಗೆ ಆಗಲಿತ. ಆ ಮೊನ್ನಂಗೆ ಮೊದುವೆ ಆದ ಮೇಲೆ ಪ್ರಾಯಸ್ಥರ್ ಕೊಟ್ಟ ಬಿಕ್ಷೆ ತಕಂಡದ್ ಬಾಯಿ ಬರದ ಹೆಣ್ಣ್ ಕಾಣದ ಗಂಡ್ ಕೂಸುನ. ಹೆಂಗೆ ಉಟ್ಟ ನೋಡಿ ಬಿಕ್ಷೆನ ಕತೆ.

ಹಿಂಗೆ ಆದರೆ ನಮ್ಮ ದೇಶ ಹೆಂಗೆ ಉದ್ದರ ಆದೆ. ಓ.. ನೋಡಿ "ಬಿಕ್ಷಾಂದೇಹಿ" ಮನೆ ಎದ್ರ್ ಒಬ್ಬ ಬಿಕ್ಷೆ ಬೇಡಂವ. ಇವಂಗೆ ಬಿಕ್ಷೆ ಕೊಡ್ಡಾ.. ಬೇಡನತ ನನ್ನ ಮನ್ಸ್‌ಲಿ ಆಗ್ತ ಉಟ್ಟು. ಇಲ್ಲೆ ಬಿಕ್ಷೆ ಕೊಡ್ದೂ ಇಲ್ಲೆ ಬಿಕ್ಷೆ ಬೇಡ್ದೂ ಇಲ್ಲೆತ ನಿಗಂಟ್ ಮಾಡಿ ಕಂಡ್ ಬಿಕ್ಷೆನ ಕತೆನ ಇಲ್ಲಿಗೆ ಮುಗ್ಸಿನೆ. ನಮಸ್ಕಾರ.

* * * * *

# "ಓ ಹೋಯ್ ಭಾವಾ ಹೆಂಗೊಳರಿ"

**– ಕೊಕ್ಕಲೇ ಮಾಲಿನಿ ಮುತ್ತಪ್ಪ**

ಬೂರ್ಗನಳ್ಳಿಲಿ ಒಬ್ಬ ಊರ್ ಗೌಡ ಇತ್ತ್. ಇಂವ ವ್ಯಾಪಾರದ ದಲ್ಲಾಳಿ ಕೆಲ್ಸ ಮಾಡ್ತಿತ್. ಬಾಯಿಂದ ಬರ್ವ ಮಾತೆಲ್ಲ ಇನ್ನೊಬ್ಬರ್ನ ವಶೀಕರಣ ಮಾಡ್ಕಣುವ ಮಾತಾಗಿತ್ತ್. ತಲೆ ತುಂಬಾ ಸುಳ್ಳು, ಇಂವನ ಮಾತ್ಗೆ ಮರುಳಾಗದವೇ ಇಲ್ಲೇ. ಈ ಮಂಸ ಊರ್ಲಿ ದೊಡ್ಡ ಹೆಸ್ರ್‌ವಾಸಿಯಾಗಿತ್ತ್. ಯಾವುದೇ ಬೆಳ್ದ ಬೆಳೆಗಳಾಗಲಿ, ಸಾಂಕಿದ ದನ– ಕರ್, ಕೋಳಿ, ಆಡ್‌ಗಳಾಗಲಿ, ಅಲ್ಲದೆ ಗೂಡೆ–ಹೈದಗಳ ಸಂಬಂಧ ಬೆಳ್ಸಿ ಮದ್ವೆ ಮಾಡ್ಸುದಾಗಲಿ, ಮನೆ ಜಾಗ ಖರೀದಿ ಮಾಡ್ಸುದಾಗಲಿ ಇಂವನ ಮಧ್ಯಸ್ಥಿಕೆ ಇಲ್ಲದೆ ಯಾವುದೇ ಕೆಲ್ಸ ಮುಂದುವರಿತಿತ್ಲೇ.

ಗೌಡನ ಪರಿಚಯವಿದ್ದವು, ಗುರುತಿಲ್ಲದವು ಕೂಡ ಇಂವನ ಮಾತಾಡ್ಸಿ ಕಾಫಿ – ತಿಂಡಿ ಕೊಡ್ಸುತ್ತಿದ್ದೋ. ಊರ್ಲಿ ಬೆಳ್ದ ಬೆಳೆಗ ಫಸಲ್‌ಗೆ ಬರ್ವ ಸಮೆಲಿ ರೈತರ ಮನೆಗಳಲಿ ಕಾಣ್ಸಿಕಂಡ್ತಿತ್. ಕಮ್ಮೊ ಕ್ರಮಲಿ ತಕಂಡ್ ಜಾಸ್ತಿ ಕ್ರಯಕೆ ಮಾರಿ ಒಳ್ಳೆ ಕಾಸ್ ಮಾಡ್ತಿತ್ತ್. ಯಾರಾದ್ರ್ ಮದ್ವೆಯಾಕುತಾದ್ರೆ ಇಂವನ ಹಕ್ಕಲೆ ಬಂದ್ ಸಂಬಂಧ ಗಟ್ಟಿ ಮಾಡ್ಕಂತಿದ್ದೋ. ಆಸ್ತಿ ಖರೀದಿ ಮಾಡವುಕೆ ಬೇಕಾದ ಆಸ್ತಿ ಸರಿ ಮಾಡಿಕೊಡ್ತಿತ್.

ಅಲ್ಲದೆ ದನ – ಕರ್‌ಗ್‌ಳ ಜಾತ್ರೆಗ ಯಾವ ಹಳ್ಳಿಲಿ ನಡ್ದದೆ ಅಂತ ಒಂದ್ ವಾರಕ್ಕೆ ಮುಂಚೆನೆ ಇಂವಂಗೆ ಗೊತ್ತಾಗ್ತಿತ್. ಇಂವ ಎಲ್ಲರ್‌ನೂ ಮಾತ್‌ಂದನೇ ಮರಳ್ ಮಾಡ್ತಿತ್ತ್. ಸಮೆಗೆ ಸರಿಯಾಗಿ ಸುಳ್ಳು ಹೇಳ್ತಿತ್.

"ವಯಸ್ಸಾದ ಗೋವುನ ವಯಸಾತ್ಲೆ ಅಂತ, ವಯಸ್ಸಾಗದೇ ಇರ್ವ ಗೋವುನ ವಯಸ್ಸಾಗುಟ್ಟುತ" ಹೇಳಿ ಜನರ್ನ ನಂಬಿಸಿ ವ್ಯಾಪಾರ ಕುದ್ರುಸುತ್ತಿತ್ತ್. ಇಂವನ ಮಾತ್ಗೆ ಮರುಳಾಗಿ ಜನಗ ಮೋಸ ಹೋಗ್ತಿದ್ದೋ. ಕೆಲ್ಸಕೆ ಬಾರದ ಕತ್ತೆನ ದೇವ್ರುಂತ ಮನ್ಸಲಿನೇ ಗ್ಯಾನ ಮಾಡಿ ಹತ್ತಾರ್ ಆಸೆಗಳ್ನ ಇಟ್ಟ್ ತಕಂಡೋದರೆ, ಇಂವನ ಮೇಲೆ ಸಿಟ್ಟಿದ್ದ ರೈತರ ಕತ್ತೆಗೆ ಎಷ್ಟೇ ಒಳ್ಳೆ ಕ್ರಯ ಕೊಡುವಂಗೆ ಇದ್ದರೂ, ಯಾರ್ನೂ ಈ ಕತ್ತೆನ ತಕಣಿಕೆ ಹತ್ರನೆ ಬಾತಿತ್ಲೆ.

ನಾ ಮಾಡ್ವ ಕೆಲ್ಸ ಪೋರ್ಲುನ ಕೆಲ್ಸ ಅಲ್ಲ ಅಂತ ಗೌಡಂಗೆ ಗೊತ್ತಿತ್. ಏನ್ ಮಾಡ್ದು ತಲೆ ಮಾರ್‌ಂದಬಂದ ಕೆಲ್ಸ ಇದಾಗಿತ್ತ್. ಸಂಸಾರನ ನಿಭಾಯಿಸಿಕ್ಕಾಗಿ ಹೊಟ್ಟೆ ತುಂಬ್ಸಿಕಣಿಕ್ಕಾಗಿ ಸುಳ್ಳು ಹೇಳಿ ಸಂಪಾದನೆ ಮಾಡ್ತಿತ್.

'ಪೊನ್ನಿ ತಿಂಗಳ್ಲಿ' ಒಂದ್ ದಿನ ಹಂಗೇ ಕಾಫಿ ಕುಡ್ಕಂಡ್ ಕೈಯಾಲೆಲಿ ಕುದ್ರಿಕನ ಒಂದ್ ಕಣ್ ದೃಷ್ಟಿ ಬೆದ್ರ್ ಹಾಕಿದ ಮುಳಿಮಾಡ್ ಮೇಲೆ, ಇನ್ನೊಂದು ದೃಷ್ಟಿ ಮಣ್ಣ್ ಗೋಡೆ ಮೇಲೆ ಬಿತ್ತ್.

ಎಲಿಗ ಅತ್ತಂದ ಇತ್ತ, ಇತ್ತಂದ ಅತ್ತ ಓಡುತ್ತಿರುದು ಕಂಡತ್ ಗೋಡೆ ಬಿದ್ದೋಕೆಯಾಗುಟು, ಬೆದ್ರ್ ಹಾಕಿದ ಮುಳಿಮಾಡ್ ಗೆದ್ದಲ್ ಹಿಡ್ದ್ ಆಗನೋ ಇಗನೋ

ತಲೆ ಮೇಲೆ ಬಿದ್ದೋಕೆ ಆಗುಟು.

ಮನೆ ಪರಿಸ್ಥಿತಿ ನೋಡಿ ನಾ ಎಷ್ಟೇ ಸುಳ್ಳು ಹೇಳಿ ಕಾಸ್ ಮಾಡ್ರು ಕೈಲಿ ಕಾಸ್ ಉಳಿತಿಲ್ಲೇ, ಅಂತ ಬೇಜಾರಲಿ ಕುದ್ದಿತ್ ಗೌಡ. ಈ ಸಮೆಗೆ ಸರಿಯಾಗಿ

"ಓ ಹೋಯ್ ಭಾವಾ ಹೆಂಗೊಳರಿ" ಅಂತ ದೊಡ್ಡ ದನಿಲಿ ಕರ್‍ಕಂಡ್ ಒಬ್ಬ ದೂರದ ನೆಂಟ ಮನೆ ಹಕ್ಕಲೆ ಬಾತ್. ಇಂವನ ನೋಡಿ ಅವಂಗೆ ಬಾಳ ಖುಷಿಯಾತ್.

"ನಾ ಸೌಖ್ಯಲಿ ಒಳೆ, ನೀವೆಂಗೊಳರಿ" ಎಂತ ಗೌಡ ಕೇಳ್ತ್. ನಾ ತುಂಬ ಬೊಚ್ಚಿ ಹೋಗೊಳೆ ಎಂತ ಬಂದ ನೆಂಟ ಹೇಳ್ವಾಕನ ಏನಾತ್ ನೀವ್ಗೆ ಎಂತ ಗೌಡ ಕೇಳ್ದೆ.

ಮನೆಗೆ ಬಂದ ನೆಂಟ್ರ ಹೆಸ್ರ್ ರಾಮಣ್ಣ. ನೋಡಿಕೆ ಗಡ್ಡ, ಮೀಸೆ ಬುಟ್ಟು ಪೋರ್ಲುಲಿ ಉಟ್ಟು. ವಯಸ್ಸ್ ಆಗಿದ್ದರೆ, ಆಗಿದ್ದರೆ 60-65ರ ಒಳಗೆ.

ಇಲ್ಲಿಂದ "ಒಂದ್ ಪರ್ಲಾಂಗ್ ಹೋದರೆ ಸಿಕ್ಕುದೆ ಬಾಳೆತೋಟ" ತೋಟದ ಒಳೆಗೆ ಹೋದರೆ ನಾಲ್ಕೈದ್ ಮನೆ ಉಟ್ಟು. ಕೆಂಪು ಪಯಿಂಟ್ ಹಾಕಿದ ಮನೆ ನಮ್ಮನೆ ಎಂತ ಗೊತ್ತು ಮಾಡಿಕಂಡತ್.

ನಂಗೊಂದು ಹಸ್ ಬೇಕಿತ್ತ್ ಭಾವ. ಹಂಞ ಸಹಾಯ ಮಾಡಿ ಎಂತ ಕೇಳಿಕಂಡ್ತ್. ರಾಮಣ್ಣನ ಮಾತ್ ಕೇಳ್ರೇ ತುಂಬಾ ಬಡತನಲಿ ಇರ್‍ವಂಗೆ ಉಟ್ಟು. ಇವಂಗೆ ಪೋರ್ಲುನ ಹಸ್‌ನ ಕೊಡ್ಸಿಯಾರ್ ನಾ ಮಾಡ್ದ ಪಾಪನ ತೀರ್‍ಸಿಕಣಿಕೆ ಒಳ್ಳೆ ಸಮೆತೇಳಿ ಮನ್ಸಲಿನೇ ಗೌಡಂಗೆ ಸಮಾಧಾನ ಆತ್.

ಮನೆಗೆ ಬಂದ ರಾಮಣ್ಣಂಗೆ ಕುಡಿಯಕೆ ಕಾಫಿ ಕೊಟ್ಟ್ ಮಾತಾಡಿಕೆ ಇಬ್ಬರು ಸುರು ಮಾಡ್ದೋ. "ನೀವು ಎಲ್ಲಿಯಾರ್ ಹಸ್‌ನ ನೋಡಿಯೊಳರಿ" ಎಂತ ಗೌಡ ಕೇಳ್ತ್. ನೋಡಿಯೊಳೆ ಭಾವ ನೀವ್ಗಳ ಅಡಿಕೆ ತೋಟ ಹಕ್ಕಲೆ ಸೋಮಪ್ಪನವ್ರ ಮನೆ ಅಂವನಲ್ಲಿ ಕೊಡ್ವು ಹಸ್ ಉಟ್ಟು, ನೋಡಿಯೊಳೆ, ನೀವೇ ನಿತ್ತ್ ವ್ಯಾಪಾರ ಗಟ್ಟಿ ಮಾಡಿಕೊಡಕು, ಎಂತ ರಾಮಣ್ಣ ಹೇಳ್ದೆ.

ಸೋಮಪ್ಪ ಹೆಸ್ರ್‌ನ ಕೇಳ್ತಿದಂಗೇ ಅಂವನ ಮನೆ ಸ್ಥಿತಿ ನೆನ್ಸಿಕಂಡ್ ಸೋಮಪ್ಪನ ಕುಟುಂಬದವು ಇಂವನ ಕಣ್ಮುಂದೆ ಕಾಣ್ಸಿದಂಗೆಯಾಗಿ ಗೌಡನ ಮುಖ "ಸುಟ್ಟ ಬಾಳೆಕಾಯಿ" ಹಂಗೇ ಆತ್.

ಅಂವನ ಮನೆಲಿ ಸಣ್ಣ ಸಣ್ಣ ಮಕ್ಕಗ, ಅವಂಗೂ ದಮ್ಮು ಕಾಯಿಲೆಗ, ಹೆಣ್ಣ್‌ಗೂ ಹುಷಾರಿಲ್ಲೇ, ಹೊಟ್ಟೆಗೆ ಗಂಜಿನು ಎತ್ತುದುಲೆ. ಸೋಮಪ್ಪ ಖರ್ಚಿಗೆ ದುಡ್ಡುಗಾಗಿ ಹಸ್‌ನ ಮಾರಿಕೆ ತೀರ್ಮಾನ ಮಾಡಿತ್, ಯಾರಿಗಾರ್ ನನ್ನ ಹಸ್‌ನ ಮಾರ್‍ಸಿಕೊಡಿ ಎಂತ ಹೇಳಿತ್.

"ಮಕ್ಕಳಿಗೆ ಒಂದ್ ಹೊತ್ನ ಗಂಜಿಗೂ ನನ್ನ ಹತ್ರ ಗತಿ ಇಲ್ಲೇ" ಹಸ್‌ನ ಲೋನ್‌ಲಿ ತಕಂಡೆ, ಲೋನ್‌ನು ಮುಕ್ತ್‌ಲೆ, ನೋಡಿ ಬೇಕರೇ, ಸುಳ್ಳು ಮನಿ ನಾ ಹೇಳಿಕಿಲೆ, ಕಿವಿಲಿ ಕೊಂಡೆಬೇರೆ ಕುತ್ತಿಯೊಳೊ" ಕಿವಿ ಹರ್‌ದೋಕೆಯಾಗುಟು. ಹಸ್‌ನ ಮಾರ್ದ್ ದುಡ್ಡುಂದ

ಲೋನ್ ಕಟ್ಟಿ ಒಂದ್ ಹೊತ್ತಾರ್ ನೆಮ್ಮದಿಂದ ಗಂಜಿ ತಿನ್ನಕ್. ನೀವು ಬೇಕಾರೆ ನಿಮ್ಮ ಕಮಿಷನ್ ತಕಣಿ ಎಂತ ಸೋಮಪ್ಪ ಹೇಳ್ದ್ ನೆನ್ಪುಗೆ ಬಾತ್ ಗೌಡಂಗೆ.

ಕಷ್ಟ ಇದ್ದದ್ ನಿಜ! ಸೋಮಪ್ಪಂಗೆ. ಅಲ್ಲದೇ ಹಸ್‌ನ ಒಳ್ಳೆ ಕ್ರಯಕ್ಕೆ ಮಾರ್ರೋಕು. ಇಂವನ ಹಸ್ ಸೌಖ್ಯಂದ ಇಲ್ಲೇ. ಒಂದೆರಡ್ ಸಲ ಅಲ್ಲ. ಆರ್ ಸಲ ಕರ್ ಹಾಕಿಕೆ ಗರ್ಭ ದರ್ಸಿತ್. ಆದ್ರೆ ಕರ್ ಹಾಕಿಕೆ ಆಗದೇ ಹೊಟ್ಟೆಲಿನೇ ಸತ್ತೇ ಹೋಗಿತ್ತ್. ಅಂದರೂ ಬದ್ಕಿದ್ ಮನೆದೇವ್ರ ಸತ್ಯಂದ. ಇನ್ನೊಂದ್ ಸಲ ಗರ್ಭದರ್ಸಿಕೆ ಜೀವಕೆ ಹಾನಿ ಉಟ್ಟು ತೇಳಿ ಪಶು ಡಾಕ್ಟರ್ ಹೇಳಿದ್ದೋ.

ಈ ಹಸ್‌ನ ರಾಮಣ್ಣಂಗೆ ಮಾರ್ಸಿ ಕೊಡುದಾದರೂ ಹೆಂಗೆತೇಳ್ವ ಯೋಚನೆಲಿ ಗೌಡ ಮುಳುಗಿ ಹೋಗಿತ್ತ್.

ಗೌಡನ ದೃಷ್ಟಿ ಇಟ್ಟ್ ನೋಡ್ತಿದ್ದ ರಾಮಣ್ಣ "ಯಾಕೆ ಭಾವ ಯೋಚಿಸುತೊಳರಿ" ಹಸ್‌ಗೆ ಏನಾರ್ ಕಾಯಿಲೆಮನಿ ಉಟ್ಟ? ಇದ್ದರೆ ಮೊದ್ಲೇ ಹೇಳಿಬುಡಿ. ನಾ ಹಸ್‌ನ ತಕಂಬೊದು ನನ್ನ ಪಿಳ್ಳಿಗಾಗಿ. ಒಂದ್ ವರ್ಷ ಮನಿಯಾತ್ ಆಸ್ಪತ್ರೆಲಿದ್ದ್. ಅಂವ ಬೊಳ್ಪುಗೆನೆ ಮನೆಗೆ ಬಂದುಟ್ಟು. ಡಾಕ್ಟರ್ ಹೇಳಿಯೊಳೊ ದಿನಾ ಹಾಲ್ ಕುಡಿಯಕೆ. ಅಲ್ಲದೆ ಹಸ್‌ನ ಕ್ರಯಕೆ ತಕಂಡ್ರೆ ಖರ್ಚಿಗೆ ಕಾಸ್ ಆದೆ. ಕುಡಿಯಕೆ ಹಾಲ್ ಆದೆ, ಎಂತ ನಂಬಿಕಂಡ್ ನೀವುಗಳಲ್ಲಿಗೆ ಬಂದೊಳೆ ಭಾವ ಎಂತ ರಾಮಣ್ಣ ಹೇಳ್ದೆ.

"ನಲ್ವತ್ ವರ್ಷದ" ದಲ್ಲಾಳಿ ಕೆಲ್ಸಲಿ ಗೌಡಂಗೆ ಇಂತಹ ಪರಿಸ್ಥಿತಿ ಎಂದೂ ಆತ್ಲೆ. ಮಕ್ಕಳಿಗೆ ಒಂದ್ ಹೊತ್ತ್‌ನ ಗಂಜಿಗಾಗಿ ಹಸ್‌ನ ಮಾರಿಕೆ ಹೊರ್ಟ ಸೋಮಪ್ಪ ಮತ್ತೆ ಸೌಖ್ಯ ಇಲ್ಲದ ಪಿಳ್ಳೆನ ಆರೋಗ್ಯಕ್ಕಾಗಿ ನನ್ನನೇ ನಂಬಿ ಬಂದ ಈ ರಾಮಣ್ಣ. ಇವಿಬ್ಬರ್ಲಿ ಯಾರ ಪರ ಮಾತಾಡಿ, ಸುಳ್ಳು ಹೇಳಿ ನಾ ವ್ಯಾಪಾರ ಕುದ್ರುಸಲಿ ಎಂತ ಯಕ್ಷ ಪ್ರಶ್ನೆಯಾಗಿ ಅಂವನಲ್ಲಿ ಉಳ್ತ್. ಯಾರ ಪರ ಮಾತಾಡಿರೂ ಪಾಪನ ಕಟ್ಕೋಳ್ಳುವ ಬದ್ಲು, ಇನ್ನೊಬ್ಬಂಗೆ ಅನ್ಯಾಯ ಮಾಡ್ದೆತೇಳ್ವ ಇನ್ನಷ್ಟ್ ಪಾಪ ನನ್ನನ ಸುತ್ತಿಕೊಂಡದೆ ಎಂತ ಗೌಡಂಗೆ ಅನ್ಸಿತ್.

"ಭಾವ, ನಾವ್ ಸೋಮಪ್ಪನ ಮನೆಗೆ ಪೋಯನಾ?" ಎಂತ ರಾಮಣ್ಣ, ಕೇಳ್ತಾಕನ ಗೌಡನ ಬಾಯಿಂದ ಅಂವಂಗೆ ಗೊತ್ತಿಲ್ಲದಂಗೆ ಇನ್ನೊಂದ್ ಸುಳ್ಳ್ ಹೊರ್ಗೆ ಬಾತ್.

'ನಾ ದಲ್ಲಾಳಿಯಲ್ಲ, ನಾ ಒಬ್ಬ ಮರ್ಯಾದಸ್ಥ ಮಂಸ' ನಂಗೆ ಕೆಟ್ಟೆಸ್ರ್ ತರ್ಬೇಡಿಯಾ!' ನೀವುಗೆ ಯಾರ್ ಹೇಳ್‌ದೋ ಅವರ ಹಕ್ಕಲೆ ಹೋಗಿ. ನೀವುಗೆ ಬೇಕಾದಂಗೆ ಮಾಡಿ. ನನ್ನ ತಲೆಕೆಡ್ಸೇಬೆಡಿ ಎಂತ ಗೌಡ ಬಾಯಿಗೆ ಬಂದ ಹಾಂಗೇ ಮಾತಾಡ್ತ್. ರಾಮಣ್ಣ, ಹೋದ ದಾರಿಗೆ ಸುಂಕ ಇಲ್ಲೆತೇಳಿ, ಮೆಲ್ಲೆ ಎದ್ದ್ ಹೊರ್ಗೆ ಹೋತು.

ಗೌಡಂಗೆ ಇಷ್ಟೊತ್ತು ನಡ್ದದ್ ಕನ್ಸತೇಳಿ ಮತ್ತೆ ಬೆದ್ರ್ ಹಾಕಿದ ಮುಳಿಮಾಡ್ ಗೆದ್ದಲ್ ಹಿಡ್ದ್ ಆಗನೋ ಈಗನೋ ಬಿದ್ದೋಗುವ ಸಮೆ ಉಟ್ಟುತೇಳಿ ಚಿಂತೆಲಿ ಕುದ್ದತ್........

* * * * *

# ನಿರ್ಧಾರ

**– ಕೊಟ್ಟಕೇರಿಯನ ಲೀಲಾ ದಯಾನಂದ**

"ನೋಡಿ ರಘು, ಇಬ್ಬರೂ ಯಾಕೆ ಹಿಂಗೆ ಒದ್ದಾಡ್ದು? ನಂಗೆ ಸಂಬಳ ಸಾಕಷ್ಟು ಬಂದದೆ. ನಾ ಚಾಕ್ರಿಗೆ ಹೋಕನ, ನೀವ್ ಮಕ್ಕಳ್ನ ನೋಡ್ಕಂಡಿರಿ. ಆಕಿಲೆನಾ? ಇದರ್‌ಲಿ ಕೀಳರ್ಮೆ ಎಂತ ಉಟ್ಟು? ಆ ಕಮಲನ ಗಂಡನ ನೋಡಿ. ಅವೆಷ್ಟು ಖುಸಿಲಿ ಒಳೊ. ಯಾರೆಷ್ಟೇ ದುಡ್ದರೂ ನಾವ್‌ಗೆ ಬೇಕಾದ್ ನೆಮ್ಮದಿನ ಬದ್‌ಕ್ ತಾನೆ?" ಯಾಗೊಳು ಕೇಳ್ತಿದ್ದ ಹೆಣ್ಣ ಪದ್ಮನ ಪ್ರಶ್ನೆಗಳ್ಗೆ ರಘುಗೆ ಜವಾಬೇ ಸಿಕ್‌ತಿತ್ಲೆ. ಕಳ್‌ದ ಹತ್– ಹನ್ನೊಂದ್ ವರ್ಸಂದ ಇದೇ ಪರ್ದಾಟಲಿ ದಿನ ಕಳೀತಿದ್ದೊ.

ಹೆಣ್ಣ್‌ಗೆ ಕೈ ತುಂಬ ಸಂಬಳ ಇದ್ದರೂ, ಇದ್ದ ಚಾಕ್ರಿನ ಬುಟ್ಟ್‌ಕಂಡ್ ಮನೆಲಿರಿಕೆ, ಮಕ್ಕಳ್ನ ನೋಡಿಕಣಿಕೆ ರಘುನ ಮನ್ಸ್ ಒಪ್ಪಿತ್ಲೆರೂ ಸನ, ಕೈ ಹಿಡ್ದವ್ಳ ಪಾಡು ನೋಡ್ಕನ ಅವಂಗೂ ಬಾಳ ಬೇನೆ ಆಗ್‌ತಿತ್. ಹಿಂಗೆ ಯಾಗೊಳು ಒದ್ದಾಡಿ ಸೋತ್ ಸುಣ್ಣಾಗಿ ಪದ್ಮ ಅಂದ್ ಒಂದ್ ನಿರ್ಧಾರಕೆ ಬಾತ್. ಅಂದ್‌ನ ದಿನ ಪದ್ಮ ಅವ್ಳ ಚಾಕ್ರಿಗೆ ರಾಜೀನಾಮೆ ಕೊಟ್ಟ್, ದಾಪುಗಾಲ್‌ಲಿ ಮನೆಗೆ ಬಾಕನ, ಅವ್ಳಿಗಿಂತ ಮುಂದೆ ಬಂದ್ ಮಕ್ಕಳ್ನ ತೊಡೆ ಮೇಲೆ ಕೂರ್ಸಿಕಂಡ್ ಕುದ್ದ ರಘು ನಗಾಡಿಕಂಡ್ ಹೇಳ್ತ್. ಪದ್ಮಾ, ನೀನ್ ಹೇಳ್ದಂಗೆ ನಾನ್ ಚಾಕ್ರಿನ ಬುಟ್ಟ್‌ಬುಟ್ಟೆ, ಇನ್ ಮೇಲೆ ನೀನೇ ಆರಾಮಲಿ ಚಾಕ್ರಿಗೆ ಹೋಕಂಡ್ ಬಾ..!!

* * * * *

# ತುಂಬಿದ ಪ್ರೀತಿ

**– ಯೋಗೀಶ ಹೊಸೊಳಿಕೆ**

ಏನ್‌ನೇ..... ಗೂಡೆ
ಅಲ್ಲಿ ನೋಡು
ಆಕಾಶಲ್ಲಿ ಎಂತ ಕಂಡದೆ
ಎರ್ಡ್ ನಕ್ಷತ್ರನ ನೋಡುಲಿ
ಮೋಡ ಹರೆತ ಉಟ್ಟು

ಈ ಮಾತ್ ಕೇಳ್ದ ಹೈದ
ಎರ್ಡ್ ಪ್ರೇಮಿಗಳ ಸೇರೆಲಿ
ಪ್ರೀತಿ ಹರ್‌ದಂಗೆ ಅಲ್ಲಾನೆ

ಆ ಹೊತ್ತ್‌ಲ್ಲಿ
ಎರ್ಡ್ ನಕ್ಷತ್ರಗ ಇವೆ ಆಗಿದೊ
ಹಳ್ಳಲ್ಲಿ ತುಂಬಿ ಮೊಗೆವ ನೀರ್‌ನಂಗೆ
ಪ್ರೀತಿ ಜೇರಿಯಾಗಿ ಹರೆತಿತ್.

* * * * *

# ಕಂಪಾಸ್ ಪೆಟ್ಟಿಗೆ ಮತ್ತೆ ಕರಿ ಚೌಂಡಿ

**– ಸೂದನ ಎಸ್.ಈರಪ್ಪ ಪಾಲೂರು**

ನಿಂಗ್ಯಾಕನೇ ಹೊಸ ಕಂಪಾಸ್ ಹಳ್ತ್ ಸಾಲ್ದ?. ಸುಮ್ಮನೆ ದುಡ್ಡು ಹಾಳ್ ಮಾಡ್ದು. ಅವ್ವ,ಅಪ್ಪ ತಂದ ಪೊರ್ಲುನ ಕಂಪಾಸ್ ಪೆಟ್ಟಿಗೆ ನೀಟಿ ಬೈತ್____. ಬ್ಯಾರೆ ಇಬ್ಬರ್ ಹೈದಂಗ ತಂದದ್ ನೋಡಿ ನಂಗೂ ಸ ಆಸೆ ಆಗಿತ್ತ್. ಹೊಸ "ನಟರಾಜ್ ಕಂಪಾಸ್" ಪೆಟ್ಟಿಗೆ ತರ್‍ೊಕುತಾ. ಅಂದ್ ಇರ್‍ಲ್ ಉಂಡ್ ಮಲ್ಗಿದವಂಗೆ ಸರಿಯಾಗಿ ನಿದ್ದೆಯೇ ಬಾತ್ಲೆ ಯಾಕೆಂತೇಳ್ರೆ ನಾಳೆ ಹೊತ್ತಾರೆ ಸ್ಕೂಲಿಗೆ ಬ್ಯಾಗ ಹೋಗಿ ನನ್ನ ಕಂಪಾಸ್ ಬೇರೆ ಹೈದಂಗಳಿಗೆ ತೋರ್‍ಸಿ ಅವರ ಹೊಟ್ಟೆಲಿ ನಂಜ್ ಬರ್‍ೊಕಲಾ

ಉದ್ದದ ಖಾಕಿ ಚೀಲನ ಹೆಗ್ಲ್‌ಗೆ ಕೋಸಿಕಂಡ್ ನಾಕ್ ಮೈಲಿ ದೂರದ ಬೆಟಗೇರಿ ಸ್ಕೂಲಿಗೆ ಬ್ಯಾಗ ಹೊರ್‍ಟೆ ಹೈದಂಗ ಗೂಡೆಗ ಎಲ್ಲಾ ನನ್ನ ಕಂಪಾಸ್ ಪೆಟ್ಟಿಗೆನೇ ನೋಡ್ದು. ಆ ಕಂಪಾಸ್‌ಲಿ ಕೈವಾರ ಕೋನಮಾಪಕ, ಹಿಸ್ತ್ ಪೆನ್ಸಿಲ್, ಉಜ್ಜಿಕೆ ರಬ್ಬರ್, ಸಣ್ಣ ಸ್ಕೇಲ್ ಆಗ ನಂಗೆ ಜಂಬ ಬ್ಯಾರೆ

ಅಪ್ಪಾ ಹೇಳಿತ್ತ್ ನೋಡ್ನೆ ಇದಿಕೆ ಒಂದು ರೂಪಾಯಿ ನಾಕಾಣೆ ಲಾಯ್ಕ ಇಟ್ಟ್ ಕಾ ಹಾಳ್ ಮಾಡ್ಬಡ_ ಹೌದು ಬಾರಿ ಕ್ರಯದ್ದ್ ನನ್ನ ಕಂಪಾಸ್ ಪೆಟ್ಟಿಗೆ! ಸ್ಕೂಲ್ ತೀರಿಸ್‌ಕಂಡ್ ನಾಕ್ ಗಂಟೆಗೆ ಮನೆಗೆ ಬಾದು ಮಾಮೂಲಿ ಅಂದ್ ಕೂಟ್ ಮಕ್ಕ ಇತ್ಲೆ ನಾನೊಬ್ಬನೆ ಪುದಿನೆರನ ಮನೆ ಗದ್ದ ಹತ್ರ ಬಾಕನ ನನ್ನ ಚೀಲ ಮುಟ್ಟಿ ನೋಡ್ದೆ ಛೆ. ಕಂಪಾಸ್ ಪೆಟ್ಟಿಗೆ ಮಾಯ! ಚೀಲದ ಮೂಲೆಲಿ ದೊಡ್ಡ ತೂತ ವಾಪಾಸ್ ಸ್ವಲ್ಪ ಹಿಂದೆ ಹೋಗಿ ಅಲ್ಲಿ ಇಲ್ಲಿ ಹುಡ್ಕಿದೆ. ಅಲ್ಲಿದ್ದ ಕೆಲವು ನೆಗಾಡಿಕಂಡ್ ಏನಾತ್‌ರತ. ಕೆಳ್ದೊ. ಏನಿಲ್ಲೆಂತೇಳಿ ಮನೆಗೆ ಬಂದೆ, ದುಃಖ ತಡಿಯಕಾತ್‌ಲೆ ಹೆದ್ರಿಕೆ ಬ್ಯಾರೆ ಮನೆಲಿ ಗೊತ್ತಾದರೆ..?ಆದರೂ ಸಮಾಧಾನ ಮಾಡಿಕಂಡೆ. ಸ್ಕೂಲ್ ಡೆಸ್ಕ್ ಮ್ಯಾಲೆ ಮರ್‍ತ್ ಬಂದಿರುವೆ. ಮಾರ್‍ನೆ ದಿನ ಸ್ಕೂಲಿಗೆ ಹೋಕನ ಹಾದಿಲಿ ಸಿಕ್ಕಿದ ಹೈದ ಒಬ್ಬ ಹೇಳ್ತ್. ನಿನ್ನ ಕಂಪಾಸ್ ಪೆಟ್ಟಿಗೆ ಪುದಿನೆರವನ ಗದ್ದೆಲಿ ಒಬ್ಬಂಗೆ ಸಿಕ್ಕುಟ್ಟು ಗುಟ್ಟಾಗಿ ಅಂವನ ಹೆಸ್ರ್ ಹೇಳ್ತ್. ಶಾಲೆ ಬುಟ್ಟಂಗೆ ಡೌಟು ಇದ್ದವನ ಮನೆಗೆ ಹೋಗಿ ಕೇಳ್ದೆ. ಕೊಡಿ ನನ್ನ ಕಂಪಾಸ್. ಮನೆಲಿ ಬೈಗಳ ಸಿಕ್ಕಿದೆ. ಅಂವ ಸೂಳೆನಂಗೆ ಆಡಿಕಂಡ್ ಇಲ್ಲಂತ್ಯೇಳತ್. ಹಿಂಬತ್ತ್ ಆರ್ ಗಂಟೆವರೆಗೂ ಅವನ ಮನೆ ಜಗ್ಲ್‌ಲಿ ಕುದ್‌ಕಂಡ್ ಮರ್‍ಟ್ .. ಮರ್‍ಟ್ ಕೇಳ್ದೆ

ನನ್ನ ಮರ್ಡಾಟಕ್ಕೆ ಅಂವನ 'ಕಲ್ಲೆದೆ' ಕರ್ಗಿತಿಲೆ. ಮರ್ಬಕಂಡೇ ವಾಪಾಸ್ ಮನೆಗೆ ಹೊರ್ಟೆ, ತಲೆ ಬ್ಯಾನೆ ಬ್ಯಾರೆ. ಮರ್ಬ್ ಕಂಡೇ ಬಂದವ ಬೈತಡ್ಕ ದೊಡ್ಡ ಗದ್ದೆಲಿ ಸುಸ್ತಾಗಿ ಕುದ್ದೆ ಗದ್ದೆ ಪುಣಿಲಿ ಹುಲ್ಲು ಕೊಯ್ಯತಿದ್ದ ಅಪ್ಪುಣಿಮಾವ ದೂರಂದ ನನ್ನ ನೋಡಿರೊಕು. ಸುಬ್ಬಯ್ಯ ಮಾವನ ಹೈದ ಗದ್ದೆಲಿ ಬಿದ್ದೊವುಟು. ನೋಡಿಂತೇಳಿ ಹತ್ರ ಓಡಿ ಬಂದೊ. ಅಯ್ಯೋ ಕೂಸಿಗೆ ಸೋಂಕು ಆಗಿರೊಕು, ಮನೆಗೆ ಎತ್ತಿಕಂಡ್ ಹೋಗು ಅಪ್ಪುಣಿಂತೇಲಿ. ಚಾಮೆವ್ವ ಹೇಳ್ತ್.

ಅಪ್ಪಣಿ ಮಾವ ಹೆಗ್ಲ್ ಮ್ಯಾಲೆ ಹಾಕಂಡ್ ನಮ್ಮ ಮನೆಕಡೆ ಬಂದೊ. ಅಕ್ಕಾ , ಅಕ್ಕಾ ಕೂಸು ಗದ್ದೆಲಿ ಬನದ ಹಕ್ಕಲೆ ಬಿದ್ದೊಗಿತ್. ಸೋಂಕಿರ್ದು! ಪೊನ್ನು ಮಲಿಯನ ಕರ್ಕಂಡ್ ಬಾಕೆ ಹೇಳ್ದೊ. ನನ್ನ ಕಟ್ಲ್‌ಲಿ ಮಲ್ಗಿಸಿ ಅವ್ವ ಮೈಪೂರಾ ಗಾಲಿ ಸೊಪ್ಪು ಉಜ್ಜಿತ್, ಅಪ್ಪ ದೊಂದಿ ಹೊಸ್ಸಿಕಂಡ್ ಯಾರ್‍ನೊ ಕರ್ಕಂಡ್ ಮಲಿಯನ ಮನೆಗೆ ಹೋತು ಪೊನ್ನಜ್ಜ ಬಾತ್ ಮೈಯೆಲ್ಲಾ ಮುಟ್ಟಿ ನೋಡ್ತ್ " ಬೋರೆ ಒಂದು ಅಲ್ಲ_ ಬೈತಡ್ಕ ಬನತ್‌ರ ಕರಿಚೌಂಡಿ. ಕೋಳಿ ಬುಡಿಂತೇಳ್ತ್ ಅಪ್ಪ ಒಂದು ಕೆಂಪು ಹುಂಜ ಲಾಕಿನ ಗೂಡುಂದ ಹಿಡ್ಕಂಡ್ ಬಾತ್, ಪೊನ್ನಜ್ಜ ಅಕ್ಕಿ ಹಾಕಿ ಕೋಳಿನ ತಲೆ ಸುತ್ತ ತಂದ್ ಮಂತ್ರ ಮಾಡಿ ಹೊರಗೆ ಬುಟ್ಟತ್ ಪೊನ್ನಜ್ಜಂಗೆ ಚನಿಯಪ್ಪನಲ್ಲಿಂದ ತಂದ ಕಳ್ಳ್‌ನ ಗ್ಲಾಸಿಗೆ ಹೊಯ್ದ್ ಕೊಡುವ ಸದ್ದ್ ಮಲ್ಗಿದ್ದ ನನ್ನ ಕೆಬಿಗೆ ಕೇಳ್ತ್. ಮಾರ್ನೆ ದಿನ ಇದ್ದವಂಗೆ ತಲೆಬ್ಯಾನೆ ಕಮ್ಮಿ ಇತ್ ಜರನೂ ಇತ್ಲೆ. ಮೂಲೆ ಹರ್‌ದ ಚೀಲಕ್ಕೆ ಅವ್ವ ಗಂಟ್ ಹಾಕಿ ಕೊಟ್ಟಿತ್, ಬ್ಯಾಸಿಗೆ ಕಳ್ದ್ ಕಾರ್ತಿಂಗ ಬಾತ್. ಐತಾರ ದಿನ ಅಪ್ಪಾ ಒಂದು ದೊಡ್ಡ ಕೆಂಪು ಹುಂಜನ ಹಿಡ್ಕಂಡ್ ಬಂದ್ ಇದರ ತಗಂಡ್ ಚೆನ್ನ ಕೋಟೆಗೆ ಹೋಗು; ಅಪ್ಪಣ ಮಾಸ್ಟ್‌ಗೆ ಹೇಳ್ಯೆ_ ನಾನು ಹುಂಜನ ಗಟ್ಟಿ ಹಿಡ್ಕಂಡ್ ಹೊರ್ಟೆ. ಬನದ ಹತ್ರ ಜನ ಸೇರಿದ್ದೊ. ದೇಸ್ರಿಗೆ ಎಡೆ ಹಾಕಿದ್ದೊ. ಅಪ್ಪಣ್ಣ ಮಾವ ಬನದ ಕಲ್ಲ್ ಹತ್ರ ನನ್ನ ನಿಲ್ಲಿಸಿಕಂಡ್ ಹುಂಜನ ಹಿಡ್ಕಂಡ್ ಅಕ್ಕಿ ಹಾಕಿ ಈ ಕೂಸು ಯಾಗೊಳು ಇದೆ ಹಾದಿಗಾಗಿ ಸ್ಕೂಲಿಗೆ ಹೋದು. ಇವಂಗೆ ಯಾವ ತೊಂದರೆ ಕೊಡಿಕಾಗದ್_.. ರಕ್ಷಣೆ ಕೊಡೊಕು. ಹೀಂಗೆಲ್ಲಾ ಹೇಳಿಕಂಡ್ ನನ್ನ ತಲೆ ಸುತ್ತು ತಂದ್ ಕೋಳಿ ಕೊಯಿದೊ. ಎಡೆ ಹಾಕಿದ ಕೋಳಿ ಗೈಪು- ಕಡುಬು ತಿಂದ್. ಕೊಯ್ದ ಕೋಳಿ ತಗಂಡ್ ನಾನ್ ಮನೆಗೆ ಬಂದೆ ಅಂದ್ ಕತ್ತಲೆಗೆ ನಮ್ಮ ಮನೆಗೆ ಉಳಿಯಕೆ ಸೋದರ ಮಾವನು ಬಂದಿದ್ದೊ.

ಈ ಘಟನೆ ನಡ್ದ್ ನಲುವತ್ತು ವರ್ಷ ಕಳ್ತ್. ನಾನಾಗ ಆರನೇ ಕ್ಲಾಸ್, ಕಂಪಾಸ್ ಪೆಟ್ಟಿಗೆ ಕಳ್ದ್ ಹೋದ ಹೆದರಿಕೆ ಮತ್ತು ಬ್ಯಾಜಾರ ತಡಿಯಕ್ಕಾಗದೆ. ನಾನ್ ಮರ್ಡ್ ,ಮರ್ಬ್ ಸುಸ್ತಾಗಿ ಬಿದ್ದ್‌ದ್ ನಿಜ. ನಂಗೆ ಕರಿಚೌಂಡಿ ಸೋಕಿದ್ ಅಲ್ಲಾಂತೇಳ್ವ ಗುಟ್ಟು ಇಂದಿಗೂ ನಂಗಲ್ಲದೆ ಬ್ಯಾರೆ ಯಾರಿಗೂ ಗೊತ್ಲೆ! ನೀವು ಸಾ ಯಾರಿಗೂ ಹೇಳ್ಬೇಡಿ.

* * * * *

# “ಹೀಂಗೆ ಸುಮ್ಮನೆ ಒಂದು ಕಾಡ್ ಹರ್ಟೆ”

– ಎಂ.ಜಿ ಕಾವೇರಮ್ಮ

“ನೀವುಗೆ ಅರೆಬಾಸೆಲಿ ಬರ್ದದರ ಓದಿಕೆ ಆದೆನೋ?” –ನಾ ಮನೆಗೆ ಬಂದೊವರೊಟ್ಟಿಗೆಲ್ಲಾ ಕೇಳ್ತಿದ್ದೆ. ಕೆಲವು ಜನ, “ಏನ್ ಆಗದೆ? ಹಂಞ ನಿದಾನ ಆದೆ ಅಸ್ಟೆ” ಎಂತ ಹೇಳ್ತಿದ್ದೊ. ಇನ್ನ್ ಕೆಲೊವು ಜನ, “ಅಬ್ಬಾ, ಅರೆ ಬಾಸೆಲಿ ಬರ್ದದರ ಯಾರ್ ಓದುದು? ಬಾಳಕಷ್ಟ” ಎಂತ ಹೇಳ್ತಿದ್ದೊ. ಬಾಸೆ ಮೇಲೆ ಪ್ರೀತಿ ಇದ್ದೋವ್ಕೆಲ್ಲಾ ಓದಿಕೆ ಸುಲಬ ಆದೇಂತ ನಾ ನೆನ್ಸಿನೆ. ನಂಗೆ ಮಾತ್ರ ಅರೆಬಾಸೆಲಿ ಓದುದು, ಬರ್ಯೋದುಂತೇಳ್ರೆ ಬಾಳಕುಸಿ.

ಕನ್ನಡಂದ ನಂಗೆ ಇದೇ ಸುಲಬ ಆದೆ. ನಮ್ಮ ಬಾಸೆ ಎಲ್ಲೋವ್ಕೂ ಗೊತ್ತಾಕು. ಎಲ್ಲೋವು ಓದೋಕು, ನಮ್ಮ ಬಾಸೆನ ತುಂಬಾ ಜನಕ್ಕೆ ತಿಳ್ಸೋಕೂಂತ ನಂಗೆ ಆಸೆ. ನಮ್ಮ ಬಾಸೆಲಿ ಎಷ್ಟೊಂದು ಒಳ್ಳೊಳ್ಳೆ ಗಾದೆಗ ಒಳೊ. ನಮ್ಮ ಅವ್ವ, ಅತ್ತಿಗೆಕ ಮಾತ್ ಮಾತಿಗೂ ಗಾದೆನ ಹೇಳಿ ಮಾತಾಡ್ತಿದ್ದೊ. ಆಗ ನಂಗೆ ಅದರ ಬೆಲೆ ಗೊತ್ತಾಗ್ತಿಲ್ಲೆ. ಈಗ ಅವೆಲ್ಲಾ ಇರಕಾಗಿತ್. ಅವರ ಬಾಯಿಂದ ಗಾದೆಗಳ ಕೇಳಿ ಕೇಳಿ ಬರ್ಯಕಣಕಾಗಿತ್ತಂತ ನಂಗೆ ತುಂಬಾ ನೆಂಪಾದೆ. ಆದರೆ ಏನ್ ಮಾಡ್ದು? ಕಾಲ ಮಿಂಚಿ ಹೋತ್. ಈಗ ಬರ್ಯಕೆ ನಾ ಒಳೆ. ಹೇಳಿಕೆ ಅವಿಲ್ಲೆಲೆ?

ಹಿಂಗಾರ ತ್ರೈಮಾಸಿಕ ಪತ್ರಿಕೆನ ಸುರುಗೆ ಓದಿಕಾಕನ ನಂಗೆ ಬಾಳ ಕುಸಿ ಆತ್. ನಮ್ಮ ಬಾಸೆಲಿನೂ ಒಂದು ಪತ್ರಿಕೆ ಬಾತಲೇಂತ. ಹೇಂಗಾದರೂ ಮಾಡಿ ಹಿಂಗಾರ ಪತ್ರಿಕೆನ ತುಂಬಾ ಜನ ಓದುವ ಹಾಂಗೆ ಮಾಡಿ, ನಮ್ಮ ಬಾಸೆನ ಬೆಳ್ಸೊಕೂಂತ ನಂಗೆ ಆಸೆ. ಹಾಂಗಾಗಿ ಮನೆಗೆ ಬಂದೊವರೊಟ್ಟಿಗೆಲ್ಲಾ ಹಿಂಗಾರ ಪತ್ರಿಕೆಗೆ ಚಂದಾದಾರರಾಗೀಂತ ಹೇಳ್ತಿದ್ದೆ. ಕೆಲವು ಜನ ಪುಸ್ತಕ ನೋಡಿ, “ಬರೇ ಇಪ್ಪತ್ತ್ ರೂಪಾಯಿ ಬೆಲೆ ಬಾಳ ಕಮ್ಮಿ ಆತ್”– ಎಂತ ಹೇಳ್ತಿದ್ದೊ.

“ನೀವುಗೆ ಮೂರು ವೊರ್ಸಕ್ಕೆ ಹನ್ನೆರ್ಡ್ ಪುಸ್ತಕ ಬಂದದೆ. ಆಗ ಲೆಕ್ಕ ಹಾಕಿರೆ ಬೆಲೆ ಇನ್ನೂ ಕಮ್ಮಿ ಆದೆ”– ಎಂತ ನಾ ಹೇಳ್ತಿದ್ದೆ. ಅವುನೂ ಸಂತೋಸಂದ ಚಂದಾದಾರರಾಗ್ತಿದ್ದೊ. ಆದರೆ ಇದರ್ಂದ ನಾ ಒಂದು ಪೇಚಿಲಿ ಸಿಕ್ಕಿದೆ. ಪುಸ್ತಕ ಬಾರದಿರಿಕಾಕನ, ನಂಗೆ ಅವು ಫೋನ್ ಮಾಡಿ, “ಏನ್ ನಿಮ್ಮ ಹಿಂಗಾರ ಪತ್ರಿಕೆ ನಾವುಗೆ ಈ ಸಲ ಬಾತೇ ಇಲ್ಲೆ. ಬೇರೆಯವ್ಕೆಲ್ಲಾ ಬಂದುಟು. ಒಮ್ಮೆ ಇಚಾರ್ಸಿ ಕಳ್ಸಿಕೆ ಏರ್ಪಾಡ್ ಮಾಡಿ”– ಎಂತ ಕೇಳ್ತಿದ್ದೊ.

‘ಅಯ್ಯೆನ ಬಂಡೆ’ ನಂಗ್ಯಾಕೆ ಬೇಕಿತ್ತ್ ಇವರ ಚೆಲ್ಯಾಣತ್ತ್?” ಎಂತ ಮೊನ್ಸ್‌ಲಿ ನೆನ್ಸಿ ಕಂಡ್, ಪೂವಪ್ಪ ಕಣಿಯೂರವ್ಕೆ ಫೋನ್ ಮಾಡಿ, ಇಂತಿಂತೊವ್ಕೆಲ್ಲಾ ಹಿಂಗಾರ ಪತ್ರಿಕೆ ಬಾತಿಲ್ಲೆ ಗಡ. ಅವ್ಕೆಲ್ಲಾ ಒಮ್ಮೆ ಕಳ್ಸುವ ಏರ್ಪಾಡ್ ಮಾಡೀಂತ ದುಂಬಾಲ್ ಬೀಳ್ತಿದ್ದೆ. ಅವುನೂ ಪಾಪ, ಎಸ್ಟೊಂದು ಕೆಲ್ಸ ಮಾಡಿವೆ. ಅವರ ವೃತ್ತಿ ಜೀವನದೊಟ್ಟಿಗೆ ಹಿಂಗಾರ ಪತ್ರಿಕೆನ ಹೊರೆನನೂ ಹೊತ್ತ್‌ಕೊಂಡೊಳೊ. ಅವುನೂ ನಂಗೆ, ‘ಆತ್ ತಿಳ್ಸಿನೇಂತ’ ಸಮಾದಾನ ಮಾಡ್ತಿದ್ದೊ. ಮಾತ್ ಎಲ್ಲಿಂದ ಎಲ್ಲಿಗೋ ಹೋತ್. ಈಗ ನಾ ದಾರಿಗೆ ಬನ್ನೆ. ಮೊನ್ನೆ ನಮ್ಮ ಮನೆಗೆ, ನೇರಲಿ ನಂಗೆ ಸೊಸೆ ಆವ ಒಂದು ಗೂಡೆ ಬಾತ್. ಅದರೊಟ್ಟಿಗೆ “ಇಂದಾ, ನೀ ಹಿಂಗಾರ ಪತ್ರಿಕೆಗೆ ಚಂದಾದಾರ ಆಗ್ ಬಲಾ.

ಬಾಳ ಲಾಯ್ಕುಟ್ಟು. ಓದಿಕೆ ಕುಸಿ ಆದೆ"– ಎಂತ ಹೇಳ್ದೆ. ಅದ್ ತೆಗ್ದ ಬಾಯಿಗೆ, ಹಿಂಗೆ ಹೇಳ್ತ್. "ಅಲ್ಲಾ ಅತ್ತೆ, ನೀವ್ಗೆ ಹೇಂಗೂ ಕೆಲ್ಸ ಇಲ್ಲೆ. ನಾವುಗುನೂ ಕೆಲ್ಸ ಇಲ್ಲೇಂತ ತಿಳ್ದಳರಿನೋ ಹೇಂಗೆ? ನಾವುಗೆ ಓದಿಕೆ ಪುರ್ಸೋತ್ತ್ ಎಲ್ಲಿ ಉಟ್ಟು? ನಾವುಗೆ ಇದೆಲ್ಲಾ ಬೇಡಪ್ಪಾ"– ಎಂತ ಕಡ್ಡಿ ಮುರ್ದಾಂಗೆ ಹೇಳ್ತ್.

"ಹೌದು ಬಲಾ. ನಾವೆಲ್ಲಾ ಕೆಲ್ಸ ಇಲ್ಲದೊವು ಓದುದು. ನಮ್ಮ ಓದುವ ಜಾತಿನೇ ಬೇರೆ. ನೀ ನನ್ನ ಜಾತಿ ಅಲ್ಲಾಂತ ನಂಗೆ ಗೊತ್ತಿತ್ಲೆ. ಬೇಡಬುಡು" ಎಂತ ಹೇಳ್ದೆ.

ಯಾಕಪ್ಪಾ ಅದರೊಟ್ಟಿಗೆ ಚಂದಾ ಹಣ ಕೇಳ್ದೇಂತ ಬೇಜಾರಾತ್. ಇದರ್ಲಿ ನಂಗೇನೋ ಲಾಭ ಉಟ್ಟುಂತ ಅದ ತಿಳ್ಕಣಿರೊಕು. ಲೀಲಾ ದಾಮೋದರ ಕುಂದಲ್ಪಾಡಿಯೊವು, ಕಳ್ದ ವೊರ್ಸದ ಸುದ್ದಿ ಬಿಡುಗಡೆ ದೀಪಾವಳಿ ಸಂಚಿಕೆಲಿ "ಓದುವ ಸುಕ" ಎಂತ ಒಂದು ಲೇಖನ ಬರ್ದಿದ್ದೊ. ನಾವೆಲ್ಲಾ ಆ ಜಾತಿಯೊವು. ಓದುದರ್ಲೇ ಸುಕ ಕಾಂಬೋವು. ನಾ ಹೈಸ್ಕೂಲ್‌ಲಿ ಓದಿಕಾಕನ, ಒಂದು ಪತ್ತೆದಾರಿ ಕಾದಂಬರಿನ ಪಾಠ ಪುಸ್ತಕದ ಎಡೆಲಿ ಇಸಿಕಂಡ್, ಮಾಸ್ಟ್ರ ಪಾಟ ಮಾಡಿಕನ ಓದ್ತಿದ್ದೆ. ಅದ್ ಅವ್ಕೆ ಗೊತ್ತಾಗಿ, ಅವು ಅದರ ತೆಗ್ದ್‌ದ್ ಕಿಡ್ಕೆಂದ ಹೊರಗೆ ಹೆರ್ಕಿ ಇಟ್ಟೊ. ಉಚ್ಚೆ ಹೊಯ್ಯಕೆ ಬುಡಿಕಾಕನ ನಾ ಹೋಗಿ ಅದರ ಹೆರ್ಕಿಕಂಡ್ ಬಂದಳೆ. ಉಂಬಕನ, ತಿಂಬಕನ ಒಂದು ಕೈಲಿ ಪುಸ್ತಕ ಹಿಡ್ಕಂಡ್ ಇರ್ತಿದ್ದೆ. ಓದುದರ್ಲಿ ಅಂತಾ ಸುಕನ ಕಾಂಬ ನಮ್ಮ ಜಾತಿನೇ ಬೇರೆ. ಅವ್ಕೆಲ್ಲಾ ಊರೋವರ ಸುದ್ದಿ ಮಾತಾಡಿಕೆ ಪುರ್ಸೋತ್ ಉಟ್ಟು. ಮೊದುವೆಗೆ, ಹುಟ್ಟಿದಲ್ಲಿಗೆ, ಸತ್ತಲ್ಲಿಗೆ, ನೆರೆಮನೆಗೆ, ನೆಂಟ್ರಮನೆಗೆ ಹೋಕೆ ಪುರ್ಸೋತ್ತ್ ಉಟ್ಟು. ಪುಸ್ತಕ ಓದಿಕೆ ಮಾತ್ರಾ ಪುರ್ಸೋತ್ ಇಲ್ಲೆ. ಬೇಡಬುಡಿ. ನಾವು ಅಂತವರ್‌ಂದ ದೂರ ಇರ್ದೇ ವಾಸಿ.

ಇನ್ ಕೆಲವು ಜನ ನೆಂಟ್ರ್‌ಗ ನಂಗೆ ಫೋನ್ ಮಾಡಿ, "ಅವ್ವಾ, ನೀವು ಅವ್ಕೆಲ್ಲಾ ಹಿಂಗಾರ ಪತ್ರಿಕೆ ಕಳ್ಸಿಕೆ, ಚಂದಾದಾರರಾಕೆ ಹೇಳ್ಯೊಳರಿ. ನಾವ್ಗ್ಯಾಕೆ ಹೇಳ್ತ್‌ಲ್ಲೆ? ನಾವು ನೀವುಗೆ ದೂರದೊವೋ?" – ಎಂತ ಕೇಳ್ತದ್ದೊ. ಆಗ ನಂಗೆ ಬಾಳ ಕುಸಿ ಆಗ್ತಿತ್ತ್. ನನ್ನ ಹಾಂಗೆ ಓದುವ ಜಾತಿಯೊವು ಒಳೊಲೇಂತ.

ಹಿಂಗಾರ ತ್ರೈಮಾಸಿಕ ಸಂಚಿಕೆ ಬಾಳ ಪೊರ್ಲುಲಿ ಬಂದದೇಂತ ಎಲ್ಲೋವು ನನ್ನೊಟ್ಟಿಗೆ ಹೇಳುವೆ. ಆದರೆ ಅದರ ಬಟವಾಡೆಲಿ ಮಾತ್ರಾ ಏರು ಪೇರಾದೆ. ಹಾಂಗಾಕೆ ಬೊತ್ತ್. ನಮ್ಮ ಅರೆಬಾಸೆ ಅಕಾಡೆಮಿನ ಸದಸ್ಯರ್ ಅನೇಕ ಅಡ್ಡಿ, ಆತಂಕನ ಎದುರಿಸಿ, ಆಯ್ಕೆ ಆದೊವು. ಅವು ತೊಪ್ಪು ದಾರಿಲಿ ನಡ್ಯಕಾಗದ್. ಹಿಂಗಾರ 3ನೇ ಮತ್ತು 4ನೇ ಸಂಚಿಕೆ ಕೆಲವು ಜನಕೆ ಸಿಕ್ಕಿತಿಲ್ಲೇಂತ ದೂರು ಬಂದುಟು. ಇನ್ನ್ ಮುಂದೆ ಹಾಂಗಾಕೆ ಬೊತ್ತ್. ಪ್ರತಿ ಚಂದಾದಾರರಿಗೂ ಎಚ್ಚರ್ಕೆಂದ ಪುಸ್ತಕಗಳ ಕಳ್ಸೋಕು. ನಾವ್ಗೆ ಪ್ರಚಾರ ಬೇಕ್. ಸಮಾರಂಭಲಿ ನಡ್ಯೆವ ಪ್ರತಿಯೊಂದು ಘಟನೆ ಪತ್ರಿಕೆಲಿ ಬರೊಕು.

'ಕೆಲ್ಸ ಇಲ್ಲದ ಆಚಾರಿ ಕೂಸುನ ಕುಂಡೆ ಕೆತ್ತಿತ್ತ ಗಡ'– ಹಾಂಗಾತ್ ನನ್ನ ಕತೆ. ನಂಗೆ ಹೇಂಗೂ ಕೆಲ್ಸ ಇಲ್ಲೆ. ಅದ್ಕಾಗಿ ನನ್ನ ಅಳಿಲ ಸೇವೆ ಅರೆಬಾಸೆಗಾಗಿ ಮಾಡ್ನೆ. ಇಲ್ಲದ ಮಲಾದ್ರನ ನನ್ನಂತೊವು ಎಳ್ದ್ ಹಾಕಂಡವಲ್ಲದೆ, ಬೇರೋವ್ಕೆ ಎಲ್ಲಿ ಪುರ್ಸೋತ್ತ್ ಉಟ್ಟು? ಹೇಂಗೂ ಇರ್ಲಿ., ಹೀಂಗೆ ಸುಮ್ಮನೆ ಬರ್ದ ಈ ನನ್ನ ಕಾಡ್ ಹರ್ಬೆನ ಓದಿ ನೀವುಗೆ ಕುಸಿ ಆತೋ?.

ಅರೆಬಾಸೆ ಒಳ್ಸಿನಿ. ಬೆಳ್ಸಿನಿ

# ಉಗ್ಗಪ್ಪ , ಉಗ್ಗಪ್ಪ ನೀವು ಪ್ಯಾಂಟ್ ಹಾಕಿತ್ಲೆನಾ

– ಭವಾನಿಶಂಕರ ಅಡ್ತಲೆ

ಮಯ ಮಯ ಕತ್ತಲೆ ಆಕೊಂಡು ಬಂದುಟು, ಅಂದ್ ಐತ್ತವಾರ, ಹಗಲಿಡೀ ಉರಿ ಬಂದ ಮಕ್ಕ ಇನ್ನ್ ಮನೆ ಸೇರುವ ಅಂದಾಜಿಲ್ಲೆ. ಅದಕ್ಕೆ ಅಜ್ಜ ಮಣ್ಣ್ ಚಿಂಟೆಲಿ ಕುದ್ದ್‌ಕಂಡ್ ಎರಡ್ ಅಡ್ಕೆ ಹೋಳುನ ಒರ್ಲ್ ಕಲ್ಲಗೆ ಹಾಕಿ ಅರ್ಧ ಕೀಂತ್ ಎಲೆಗೆ ಸುಣ್ಣ ಹಾಕಿ ಒಟ್ಟಿಗೆ ಇಸಿ ಗುದ್ದಿಕೆ ಶುರು ಮಾಡಿಕಾಕನ, ಜಾಲ್ ತಲೇಂದ ಟಕ್ ಶಬ್ದ ಕೇಳ್ತ್, ಅಷ್ಟೊತ್ತಿಗೆ ಅಯ್ಯೋ_ ಹಾಂ_ ಹಾಂ,,,, ಅಂತ ಸಣ್ಣಂವ ಮರ್ಜುದು ಕೇಳ್ತ್. ಅಯ್ಯೆ ಎಲ್ಲಿತ್ ಗೊತ್ತಿಲ್ಲೆ ಓಡಿ ಹೋಗಿ ದೊಡ್ಡವನ ಹಿಡ್ದ್ ಬೆನ್ನಿಗೆ ಗುಯಂಕ ಗುದ್ದಿತ್ .ಗುದ್ದಿದ ಶಬ್ದ ಗೊಡಂಗು ಕಾಯಿ ಚಾಳೆಂದ ಬಿದ್ದಾಂಗೆ ಕೇಳ್ತ್. ಒಟ್ಟಿಗೆ ಅವನ ವಾಲಗೊನು ಶುರು ಆತ್. ಈ ಬೊಬ್ಬೆಗೆ ಒಳಗೆ ಚಾ ಕುಡ್ಕಂಡಿದ್ದ ಅಪ್ಪಂಗೆ ರೇಗಿತ್ತ್. ಒಳಗೆಂದ ಒಂದು ದೊಣ್ಣೆ ತಕಂಡ್ ಜಾಲಿಗೆ ಓಡಿ ಬಾತ್. ನಿಮ್ಮಿಬ್ಬರ ಕೈಕಾಲ್ ಮುರ್ತ್‌ಲರೆ ಸುಖಃ ಇಲ್ಲೆ. ಒಂದು ಬೊಳ್ಪಿಗೆ ಉರಿ ಬಾಕೆ ಶುರು ಮಾಡ್ದೊವು ಇನ್ನ್ ಒಳಗೆ ಸೇರಿಕೆ ಆತ್‌ಲೆ. ಇವು ಶಾಲೆಗೆ ಹೋವ ಮಕ್ಕ ಗಡ ರಜೆ ಇದ್ದರೆ ಕೈಲಿ ಹಿಡ್ದ ಕೆಲ್ಸ ಇಲ್ಲೆಂತ ಮನೆಂದ ಜಾಲಿಗೋ ಅಪ್ಪ ಎತ್ತಕೊರೆ ಎರಡ್ ವಾಲಗನು ದೀಪ ಕೆಡ್ಸಿದಾಂಗೆ ನಿಂತೆ ಹೋತ್. ಅಯ್ಯೆ ಎರಡ್ ಮಕ್ಕ ಎಲ್ಲಿ ಮಾಯ ಆದೋ ಗೊತ್ತಿಲ್ಲೆ..

ಅಣ್ಣಿ ಅಜ್ಜಂಗೆ ಕುದ್ದಲಿಗೆ ನಗೆ ತಡ್ಯಕಾತ್‌ಲೆ ಇನ್ನ್ ನೆಗಾಡಿರೆ ಇವನ ಕೋಪ ನೆತ್ತಿಗೇರ್ದುಂತ ಅಜ್ಜ ಒರ್ಲ್ ಕಲ್ಲ್‌ಲಿ ಇದ್ದ ಎಲೆ ಅಡ್ಕೆನ ಬಾಯಿಗೆ ಅಡ್ಡ ತುಂಬಿಸಿಕಾಂತ್, ಹಾಂಗೆ ಅಕ್ಕಂಡ್ ಯೋಚನೆ ಮಾಡ್ದೊ. ಇದೆಲ್ಲಾ ಮೊನ್ನೆನ ಆರ್‌ಎಸ್.ಎಸ್‌ಂದ. ಈಗ ಆರ್.ಎಸ್.ಎಸ್‌ನೊವು ಚಡ್ಡಿನಬದ್ಲ್ ಪ್ಯಾಂಟ್ ಹಾಕ್ದು. ಅಂವ ದೊಡ್ಡಂವ ಒಂದೆರಡ್ ಸರ್ತಿ ಆರ್.ಎಸ್.ಎಸ್.ನ ಶಾಖೆಗೆ ಹೋಗಿ ಹಂಞ ಕಲ್ತ್‌ಕೊಂಟು. ಅವು ಅಲ್ಲಿ ದೊಣ್ಣೆ ಬೀಸುದರ ಸಣ್ಣಂವನೊಟ್ಟಿಗೆ ತೋರ್ಸಿಕೆ ಹೋತ್. ಇವನ ಬಡಾಯಿಂದಾಗಿ ಅವನ ತಲೆ ಕೊಟ್ಟ ಬಂದುಟು. ಅಂವ ಒಬ್ಬ ತಲೆ ಹೋಕ. ಅಂವ ದೊಣ್ಣೆ ಬೀಸಿಕಾಕನ ಇಂವ ದೂರ ನಿತ್ತಿದರೆ ಆಗಿರ್ದು. ಇಂವ ಕೆಪ್ಪನಾಂಗೆ ಹಕ್ಕಲೆ ನಿತ್ತಿಕಂಡ್ ನೋಡಿರೊಕು. ಅಲ್ಲಾ ಕಂಡತ್ತಿಲೆನಾ?. ಅಂತೂ ಇಂತು ಒಬ್ಬನ ಉಸಿರು ಕೂಡಾ ಈಗ ಕೇಳ್ದುಲೆಂತ ಅಜ್ಜ ಗ್ರಹಿಸಿಕಾಕನ ಮಕ್ಕ ಎಲ್ಲಿಂದಲೊ ಕೋಳಿ ಪಿಳ್ಳೆಗಳಾಂಗೆ ಓಡಿ ಬಂದ್ ಅಜ್ಜನ ಹಕ್ಕಲೆ ಕುದ್ದೊ. ಅಜ್ಜಂಗೆ ಒಂದು ಕಡೆಂದ ನೆಗನೂ ಬಂದದೆ ಇನ್ನೊಂದು ಕಡೆಂದ ಸಿಟ್ಟುನೂ ಬಾತ್. ಏನಣ್ಣಾ ಆತಾ ನಿಮ್ಮ ಡೊಂಬರಾಟ. ನಿನ್ನ ದೊಣ್ಣೆ ಬೀಸಟಂದಾಗಿ ಅವನ ಕಣ್ಣೋ, ಹಲ್ಲೋ ಹೋಗಿದರೆ ಏನ್ ಮಾಡಕಿತ್ ಅಂತ ದೊಡ್ಡಪಿಳ್ಳೆನೊಟ್ಟಿಗೆ ಕೇಳ್ದೊ. ಅಲ್ಲ ಉಗ್ಗಪ್ಪ ಆರೆಸ್ಸ್‌ಸ್‌ಲಿ ದೊಣ್ಣೆ ವರಸೆ, ಕತ್ತಿ ವರಸೆ ಎಲ್ಲಾ ಹೇಳಿಕೊಟ್ಟವೆ. ಇದ್ ಅವರವರ ರಕ್ಷಣೆಗೆ ಬೇಕಾದೆ. ಅದರ ಇವಂಗೆ ಹೇಳಿಕೊಡೊಮೊಂತ ಹೇಳಿರೆ ಇಂವ ಕೆಪ್ಪರಾಂಗೆ ಹಕ್ಕಲೆ ಬಂದ್ ನಿತ್ತುಟು.! ಅಲ್ಲ

ಉಗ್ಗಪ್ಪ ಇಂವ ಬೀಸಿಕಂಡ್ ನನ್ನ ಹಕ್ಕಲೆ ಬಂದದ್, ನಾ ದೂರಲೇ ಇದ್ದೆ. ಸಣ್ಣ ಪಿಳ್ಳಿ ಹೇಳ್ತ್. ಮತ್ತೆ ಹೇಂಗೆ ದೊಣ್ಣೆ ಬೀಸುದು. ಬೀಸಿಕಂಡ್ ಬೀಸಿಕಂಡ್ ವೈರಿಗಳ ಹಕ್ಕಲೆ ಹೋಕು, ದೊಡ್ಡಂವಂದ್ ಸಮಜಾಯಿಸಿಕೆ. ವೈರಿ ನಿನ್ನ ಅಪ್ಪ. ಸಣ್ಣವಂಗೆ ಸಿಟ್ಟ್ ಬಾತ್. ನೋಡಿ ಉಗ್ಗಪ್ಪ ಅಂವ ಎಂತ ಹೇಳ್ದ್ ದೊಡ್ಡ ಪಿಳ್ಳಿ ಅಜ್ಜನೊಟ್ಟಿಗೆ ದೂರು ಕೊಟ್ಟತ್. ಅಜ್ಜ ಮಾತ್ರ ಸಣ್ಣ ಪಿಳ್ಳಿನ ಪರ ವಹಿಸಿ ಹೇಳ್ದೊ, ನೀ ಆಗಿದರೆ ಅವನ ಹಲ್ಲ್ ಉದ್‌ರ್ಸಿದ. ನೋಡ್ ಪಾಪ ಅವನ ಹಣೆ ಹಕ್ಕಲೆ, ಒಂದು ಚೊಲ್ಲಿದ ಅಡ್ಕೆ ತೋರ ಕೊಟ್ಟ ಬಂದುಟು. ನೀವ್ಗೆಲ್ಲಾ ಹೇಳಿರೆ ಆಕಿಲೆ. ಉಂಡು ತಿಂದ್ ಗೆಂಡೆ ರೋಗ ತೇಳ್ವಾಂಗೆ. ಅಜ್ಜ ಹೇಳಿಕಂಡಿದಾಂಗೆ ದೊಡ್ಡ ಪಿಳ್ಳಿ ಇಂದ್ ಗೆಂಡೆ ರೋಗ ಅಲ್ಲ ಉಗ್ಗಪ್ಪ ಕೊಟ್ಟ ರೋಗಂತ ಹೇಳ್ತ್. ಸಣ್ಣವಂಗೆ ಹಿಂದಕೆ ಸಿಟ್ಟ್ ಭಾತ್ ಅಜ್ಜನ ಹಿಂದೆ ಕುದ್‌ಕಂಡಿದ್ದ ಅಣ್ಣಂಗೆ ಅಜ್ಜನ ತಲೆಂದ ಕಡ್ಪ ಒಂದು ಹೆಟ್ಟಿತ್ತ್.. ಇಧ್ ಕೊಟ್ಟ ರೋಗಾಂತ ಒಟ್ಟಿಗೆ ಹೇಳಿಕಾಂತ್. ಅಂವ ಬುಟ್ಟೆದನಾ ಅಂವ ಇವನ ತಲೆ ಜುಟ್ಟುನ ಹಿಡ್ಕಂತ್ ಅಜ್ಜ ನೋಡುಲಿ ಮಕ್ಕಳ ಉರ್ದಪತ್ತಕೆ ಅಜ್ಜ ಅಂಗಾತ ಬಿದ್ದೊ. ಅಲ್ಲಿಂದ ಅತ್ತ ಇತ್ತ ತಬ್ಬರ್ಸಿ ಅಜ್ಜ ದೊಣ್ಣೆಗೆ ಕೈ ಹಾಕಿದೊ.. ನಿಮ್ಮ ಇಬ್ಬರ ಗುಂಡಿ ಕಡ್ದ್ ಇಸಿನೆ ಈಗಂತ ಬೊಬ್ಬೆ ಹಾಕಿದೊ. ಅಜ್ಜನ ಬೊಬ್ಬೆ ಜೋರಾದರೆ ಅಪ್ಪಂದ ನಾವ್ಗೆ ಬೀಳ್ದುಂತ ಮಕ್ಕ ಇಬ್ರೊರು ಅಜ್ಜನ ಬಾಯ್ಗೆ ಕೈ ಹಿಡ್ದ್ ಅಲ್ಲೆ ತಬ್ಬಿಕಂಡ್ ಕುದ್ದೊ.

ಉಗ್ಗಪ್ಪ ಉಗ್ಗಪ್ಪ ನೀವು ಪ್ಯಾಂಟ್ ಹಾಕಿತಿಲೆನಾ? ದೊಡ್ಡ ಪಿಳ್ಳಿ ಅಜ್ಜನೊಟ್ಟಿಗೆ ಕೇಳ್ತ್. ಇಲ್ಲೆ ಮಕ್ಕಳೇ ನಾ ನನ್ನ ಜೀವಮಾನಲಿ ಪ್ಯಾಂಟ್ ಹಾಕಿದಂವ ಅಲ್ಲ. ಅದರ ಹೇಂಗೆ ಹುಗ್ಗುಸುದೋ, ಗುಬ್ಬಿ ಹೇಂಗೆ ಹಾಕುದು ಉಚ್ಚೆ ಬಾಕನ ಹೊಯ್ಯೆದು ಹೇಂಗೆ. ನಂಗೊಂದು ಗೊತ್ತಾದುಲೆ. ಆಗ ನೀವು ಶಾಲೆಗೆ ಹೋಕನ ಪ್ಯಾಂಟ್ ಇತ್ತ್‌ಲೆನಾ ಸಣ್ಣ ಪಿಳ್ಳಿ ಕೇಳ್ತ್? ಪ್ಯಾಂಟ್‌ಂದ ಚಡ್ಡಿ ಹೊಲ್ಸುದೇ ಬಂಗಲೇ .ಅದ್ ದೊಡ್ಡ ದಪ್ಪದ ಅರಿವೆ. ಇದ್ದರೆ ವರ್ಷಕ್ಕೊಂದು ಚಡ್ಡಿ, ದೊಡ್ಡ ದೋಂಗಲೆ ಚಡ್ಡಿ ಹೊಲ್ಸಿರೆ ಒಂದು ವರ್ಷ ಹಾಕೊಕು. ಕತ್ತಲೆಗೆ ಬಂದ್ ನೀರಡಿಲಿ ಒಗ್ದ್ ಹಾಕಿರೆ, ಬೊಳ್ಪಿಗೆ ಅದರ್ನೇ ಹಾಕೊಂಡೋದು. ಬೀಜದ ಟೈಮ್‌ಲಿ ಬೀಜ ಹೆರ್ಕಿಕೆ ಕೂಡಾ ಅದರ್ನೇ ಹಾಕೊಂಡೋತಿದ್ದೊ. ವರ್ಷ ಆಕೆ ಮುಂದೆ ಚಂಡ್ಡಿನ ಕುಂಡೆ ಹರ್ದರೆ ,ಅವ್ವ ಅದ್ಕೆ ಒಳಗೆಂದ ಬಟ್ಟೆ ಇಸಿ ಪತ್ತೆ ಹಾಕ್‌ತಿದ್ದೊ. ಪತ್ತೆ ತೇಳಿರೆ ಎಂತ ಉಗ್ಗಪ್ಪ.? ಸಣ್ಣ ಪಿಳ್ಳಿ ಮತ್ತೆ ಕೇಳ್ತ್. ಪತ್ತೆಂತೇಳ್ರೆ ಚಡ್ಡಿ ಕುಂಡೆಲಿ ಉರುಂಟು ಹರ್ದರೆ ಚಡ್ಡಿ ಒಳಗೆಂದ ಬೇರೆ ಬಟ್ಟೆ ತೆಗ್ದು ಹರ್ದದರ ಒಳಗೆಂದ ಇಸಿ ಉರುಂಟು ಹೊಲಿಯೊದು. ಅದ್ ಕೈಲಿ ಹೊಲಿತಿದ್ದದ್. ಆಗ ಅಪ್ಪಂಗೆ ಪ್ಯಾಂಟ್ ಹೊಲ್ಸಿದ್ ಯಾಗ ಉಗ್ಗಪ್ಪ/? ದೊಡ್ಡ ಪಿಳ್ಳಿ ಕೇಳ್ತ್, ಅಂವ ನಿಮ್ಮಾಂಗೆ ಮೂರು ತಿಂಗ ಆಕನ ಹಾಕಿತ್ತೆ. ಅವನ ಪ್ಯಾಂಟ್ ಕಥೆ ಕೇಳಿರೆ ನೀವು ನೆಗಾಡುವೆರಿ. ಅಂವ ಗೊತ್ತಾದರೆ ನಂಗೆನೂ ಬೊಯ್ಯೆದು ಹೇಳಿ. ಹೇಳಿ ಉಗ್ಗಪ್ಪ ಹೇಳಿ ಉಗ್ಗಪ್ಪ ಹೇಳಿ ಉಗ್ಗಪ್ಪ. ಮಕ್ಕ ಇಬ್ರೊರೂ ಅಜ್ಜನ ಕುದ್ದಲಿಂದ

ಅಲ್‌ಗ್‌ಸಿಕೆ ಶುರು ಮಾಡ್ದೊ. ಹೇಳಿನೆ ಆದರೆ ಅಪ್ಪಂಗೆ ಗೊತ್ತಾಕೆ ಬೊತ್ತ್. ಇಲ್ಲೆ ಇಲ್ಲೆ ನಾವು ಹೇಳ್ದುಲೆ ಉಗ್ಗಪ್ಪ ಮಕ್ಕ ಒಟ್ಟಿಗೆ ಹೇಳ್ದೊ.

ಅಂದರೆ ಹೇಳಿನೆ. ಅಂವ ನಂಗೆ ನೆಂಪಿದ್ದಾಂಗೆ 5ನೇ ಕ್ಲಾಸ್‌ಲೋ 6ನೇ ಕ್ಲಾಸ್‌ಲೋ ಹೋತಿತ್ತ್. ಆ ಟೈಮ್‌ಲಿ ನಮ್ಮ ಪಿಂಡಿಮನೆ ಲಕ್ಷ್ಮಣ ಟೈಲರ್ ಅರಂತೋಡುಲಿ ಟೈಲರಿಂಗ್ ಕೆಲ್ಸ ಮಾಡಿಕಂಡಿತ್ತ್. ಆಗ ನಿನ್ನಪ್ಪ ನಿನ್ನ ಉಗ್ಗವ್ವ ತಳ್ರೆ ಅವನ ಅವ್ವನೊಟ್ಟಿಗೆ ಜಗಳ ಮಾಡಿ ಪ್ಯಾಂಟ್ ಹೊಲ್ಸೊಕೂಂತ ಹಠ ಹಿಡ್ತ್, ಉಗ್ಗಪ್ಪನೂ ಬೇಜಾರಾಗಿ ಒಂದು ನಾಲ್ಕ್ ಕೇ.ಜಿ ಬೀಜನ ಮಾರಿ ಅಂವಂಗೆ ಒಂದು ಕಪ್ಪು ಅರಿವೆನ ತೆಗ್ದ್, ಇದೇ ಲಕ್ಷ್ಮಣನ ಕೈಲಿ ಪ್ಯಾಂಟ್ ಹೊಲ್ಸಿಕೆ ಹಾಕಿದೊ.. ಅಂವಂಗೂ ಪ್ಯಾಂಟ್ ಹೊಲಿಯಕೆ ಸರಿ ಗೊತ್ತಿಲ್ಲೆ.. ಪ್ಯಾಂಟ್ ಹೊಲಿಯಕಾಕನ ಒಂದು ಕಾಲ್ ಉದ್ದ ಇನ್ನೊಂದು ಕಾಲ್ ಗಿಡ್ಡ ಆಗಿತ್ತ್. ಅಂತು ನಿನ್ನ ಅಪ್ಪಂಗೆ ಭಾರೀ ಖುಷಿ. ಆಗನ ಕಾಲಲಿ ಮಕ್ಕಳೊಟ್ಟಿಗೆ ಪ್ಯಾಂಟ್ ಇದ್ದೊವು ಬಾರಿ ಕಮ್ಮಿ. ಇಂವ ಪ್ಯಾಂಟ್ ಹೊಲ್ಸಿ ,ನಮ್ಮ ನಾಗಪ್ಪನ ಮೊದುವೆ ದಿನ ಕತ್ತಲೆಗೆ ಹಾಕಂಡ್ ಹೋತ್. ಮದುವೆಲಿ ಸೇರ್ದ ಮಕ್ಕ ಇಂವ ಪ್ಯಾಂಟ್ ಹಾಕಿ ರೈಸುದುರ ನೋಡಿ ಇಂವನ ಪ್ರಾಯದ ಕೆಲವು ಮಕ್ಕ ನಂಜಿ ಮಾಡ್ರೆ ಇನ್ನು ಕಲೆವುಕೆ ಕುಷಿ ಆಗಿ ಪ್ಯಾಂಟ್‌ನ ಮುಟ್ಟಿ ಮುಟ್ಟಿ ನೋಡ್ತಿದ್ದೊ. ಹಾಂಗೆ ಅಂದ್ ಕತ್ತಲೆಗೆ ಮೊದರೆಂಗಿ ಊಟ ಮಾಡಿ ಮಾರನೇ ದಿನ ಪಚಾರದ ಊಟಕೆ ಅಡ್ಗೆಗೆ ಸಹಾ ಜನ ಸೇರ್ದೊ.. ಮಕ್ಕ ಎಲ್ಲಾ ಹಂಞ ಹೊತ್ತು ನೆಟ್ಟಿಕಾಯಿ ಕೊಯ್ದ್ ಮಲ್ಗಿದೊ. ನಿನ್ನ ಅಪ್ಪನೂ ಮನೆಗೆ ಬಾಕೆ ಯಾರೂ ಇಲ್ಲದೆ ಆ ಮಕ್ಕಳೊಟ್ಟಿಗೆ ಅವರ ಕೊಟೆಗೆಲಿ ಮಲ್ಗಿಟು. ಇಂವ ಕತ್ತಲೆಗೆ ಊಟ ಮಾಡಿಕಾಕನ ಸರೀ ನೀರ್ ಶರ್ಬತ್ ಕುಡ್ದುಟು. ನಡು ಇರ್‌ಲ್‌ಗೆ ಆಕನ ಇಂವಂಗೆ ಉಚ್ಚೆ ಬಂದುಟು. ಒಬ್ಬಂಗೆ ಹೋಕೆ ಹೆದ್ರಿಕೆ ಆಗಿ ಗುಡಿ ಹಾಕಿ ಮಲ್ಗಿಟು. ಬೊಳ್ಪು ಆಕೆಕಾನ ಇವಂಗೆ ಎದ್ರದೆ ಉಪಾಯ ಇಲ್ಲೆ. ಮಕ್ಕಳ ನಡೂಂದ ಎದ್ದ್ ಕೊಟೆಗೆ ಹಿಂದೆ ಓಡಿಟು. ಈ ಪ್ಯಾಂಟ್ ಹಾಕಿ ಅಭ್ಯಾಸ ಇಲ್ಲದೆ ಇವಂಗೆ ಅದರ ಚೈನ್ ಬೇಗ ತೆಗ್ಯಕೆ ಆಗದೆ ಉಚ್ಚೆ ಪ್ಯಾಂಟ್‌ಲೇ ಹಂಞ ಹೊಯ್ದ್ ಹೋಗುಟು. ಏನೆಲ್ಲ ಮಾಡಿ ಚೈನ್ ತೆಗ್ದ್ ಒಳ್ದ ಉಚ್ಚೆ ಹೊಯ್ದುಟು. ಇನ್ನ್ ಏನ್ ಮಾಡ್ದು ಪ್ಯಾಂಟ್ ಉಚ್ಚೆ ಆದರ್‌ಂದ ಬೇರೆ ಮಕ್ಕಳಿಗೆ ವಾಸನೆ ಬಂದದೆಂತ ಹೆದ್ರಿಕಂಡ್ ಹಕ್ಕಲೆ ಇದ್ದ ಗದ್ದೆಗೆ ಹೋಗುಟು. ಅಲ್ಲಿ ಹೋಗಿ ಗದ್ದೆ ನೀರ್‌ಲಿ ಈ ಪ್ಯಾಂಟ್‌ನ ತೊಳ್ದುಟು. ಆದರ್ ಉಚ್ಚೆ ಹೊಯ್ದಿದ್ದೆ ಮತ್ತೆ ತೊಳ್ದದ್ ಹಾಂಗೆ ಇಡೀ ಪ್ಯಾಂಟ್ ಚಂಡಿ ಆಗುಟು. ಮನೆ ಹೋಗೊಮೊ ತಳ್ರೆ ಇನ್ನ್ ಸರಿ ಬೊಳ್ಪು ಆತ್‌ಲೆ. ಏನ್ ಮಾಡ್ದುಂತೇಳಿ ಮತ್ತೆ ಮಕ್ಕಳ ನಡುಲಿ ಹೋಗಿ ಮಲ್ಗಿಟು. ಹಂಞ ಹೊತ್ತ್‌ಲಿ ಬೊಳ್ಪಾಗುಟು. ಇವನ ಹಕ್ಕಲೆ ಮಲ್ಗಿದ ಮಕ್ಕ ಇಂವನ ಚಂಡಿ ಪ್ಯಾಂಟ್‌ನ ನೋಡಿ ಹೊಸ ಪ್ಯಾಂಟ್‌ನವ ಉಚ್ಚೆ ಹೊಯ್ದುಟು.ಂತ ತಮಾಷೆ ಮಾಡಿ ನೆಗಾಡಿಕೆ ಶುರುಮಾಡ್ದೊ. ಅಲ್ಲಂತೇಳಿರೆ ಮಲ್ಗಿದಲ್ಲಿ ಹೇಂಗೆ ಚಂಡಿ ಆದ್‌ತ ಇಂವಂಗೂ ಎಂತ ಹೇಳಿಕಾಗದೆ ನಾಚಿಕೆಲಿ ಮರ್ಡಿಕೆ ಶುರು ಮಾಡ್ತ್. ಅಷ್ಟೊತ್ತಿಗೆ ದೊಡ್ಡೊವೆಲ್ಲ ಮಕ್ಕಳಿಗೆ ಬೊಯ್ದ್

ಸುಮ್ಮನಿರ್ಸಿಯೊಳೊ. ಹಾಂಗೆ ಮನೆಗೆ ಬಾಕನ ನಿನ್ನ ಅಪ್ಪನ ಮೋರೆ ಹೋಕನ ಇದ್ದಾಂಗೆ ಇತ್ಲೆ. ಬಾಡ್ದ ಮೋರೆ ನೋಡಿ ಅವ್ವನೂ ಎಂತಾತ್‌ಂತ ಒತ್ತಿ ಕೇಳಿಕಾಕನ ವಿಷಯ ಹೇಳಿಟು. ಇವನ ಉಚ್ಚೆಂದಾಗಿ ಅಂದ್ ಅಂವ ಮದುವೆಗೆ ಸಹ ಹೋತಿಲೆ. ಅಪ್ಪನ ನೆನ್ಸಿರ ಪಾಪ ಅನ್ಸಿದೆ. ಸಣ್ಣ ಪಿಳ್ಳಿ ಹೇಳ್ತ್. ಹೌದು ಹೌದು ಪಾಪಂತ ಅನ್ಸಿದೆ. ಯಾಕೆಂತೇಳ್ರೆ ಇಂವ 8ನೇ ಕ್ಲಾಸ್‌ಲಿ ಹಾಸಿಗೆಲಿ ಉಚ್ಚೆ ಹೊಯ್ದಂವಂತೇಳಿ ನೆಗಾಡಿಕೆ ಶುರುಮಾಡ್ತ್ ದೊಡ್ಡ ಪಿಳ್ಳಿ. ಅದಾ ಉಗ್ಗಪ್ಪ ನಾ ಕನ್ಸಲಿ ಹೊಯ್ಕಂಡದ್ ಶಾಲೆಗೆ ಹೋದ ಕನ್ಸ್ ಕಟ್ಟಿ , ಅಲ್ಲಿ ಬೆಲ್ ಆಕನ ಎಲ್ಲ ಮಕ್ಕಳೊಟ್ಟಿಗೆ ಓಡಿಕಂಡ್ ಹೋಗಿ ಟಾಯ್ಲೆಟ್ಟಿಗೆ ಹೊಯ್ದದ್ ಕನ್ಸ್ ಕಟ್ಟಿದ್, ಬೆನ್ನ್ ಚೆಂಡಿ ಆಕೇಕನನೇ ಗೊತ್ತಾದ್. ಇದ್ ಟಾಯ್ಲೆಟ್ ಅಲ್ಲ ಹಾಸಿಗೆಂತ. ಅವನ ಕಥೆನೂ ಹೇಳಿಕಾಂತ್. ಕನ್ಸಲಿ ಎಷ್ಟೋ ಮಕ್ಕ ಹೊಯ್ದವೆ. ಅದ್ ದೊಡ್ಡ ಸಂಗತಿ ಅಲ್ಲಾಂತ ಅಜ್ಜ ಸಣ್ಣ ಪಿಳ್ಳಿನ ಪರ ವಹಿಸಿದೊ. ಅಷ್ಟೊತ್ತಿಗೆ ಅಲ್ಲಿಗೆ ಬಂದ ಮಕ್ಕಳ ಪೊಪ್ಪ ಹೌದು ಹೌದು ಉಗ್ಗಪ್ಪನೂ ಕಮ್ಮಿ ಇಲ್ಲೆ. ನಾವು ಸಣ್ಣದಿರಿಕಾಕನ ಅಪ್ಪ ಬೀಜದಣ್ಣ್ ಸರಾಯಿ ಕುಡ್ದ್ ಮೇಲೆ ಬೆಂಚಿಲಿ ಮಲಗುದು. ಕೆಳಗೆ ನಾ ಅಕ್ಕನ ಮಕ್ಕ ಮೊಂದ್ರಿ ಹಾಕಿ ಮಲ್ಗುದು. ಅಪ್ಪ ಇರ್ಲ್ ಎದ್ದ್ ಬೆಂಚಿಂದ ಇಳ್ದ್ ನಮ್ಮ ಮೊಂದ್ರಿಗೆ ಕುದ್ದ್‌ಕಂಡ್ ಉಚ್ಚೆ ಹೊಯ್ದದಕ್ಕೆ ಲೆಕ್ಕನೇ ಇಲ್ಲೆ. ಬೊಳ್ಗಿಗೆ ಅವ್ವ ಎದ್ದ್ ಬಾಯಿಗೆ ಬಂದಾಂಗೆ ಬೊಯ್ಯೊವೊ.. ಅವರ ಮೇಲೆ ದೇವರ ಪೋಟೋ ಉಟ್ಟು, ನಾ ಸೆಗಣಿ ಹಾಕಿದೆಲ್ಲಾ ಪದನಿ ಗುಳ್ಳೆ ಎದ್ದುಟು. ನೀವ್ಗೆ ಒಂದು ಚೂರು ಭಾಷೆ ಇಲ್ಲೆಂತ ಬೊಯ್ದರೆ, ಅಪ್ಪ ನೆಗಾಡಿಕಂಡ್, ದೇವುರ ಪೋಟೋ ಇದ್ದರೆ ನಾವು ಕೂಡಾ ದೇವ್ರಗೆ ಮಕ್ಕ ಅಲ್ಲನಾ? ನಾ ಜಾಲಿಗೆ ಹೋಗಿ ಉಚ್ಚೆ ಹೊಯ್ದ ನೆಂಪುಂತ ಹೇಳಕಂಡ್ ನೆಗಾಡ್ತಿದ್ದೊ.. ಹೌದಾ ಉಗ್ಗಪ್ಪ ಮಕ್ಕ ಇಬ್ಬರೂ ಕೇಳಿಕಾಕನ, ಅದ್ರ ಬಗ್ಗೆ ನಂಗೆ ಸರಿ ನೆಂಪು ಇಲ್ಲೆ ಮಕ್ಕಳೆ. ಆಗಿರ್ದುಂತ ಹಾರಿಕೆ ಉತ್ತರ ಕೊಟ್ಟೊ, ಅಷ್ಟೊತ್ತಿಗೆ ಕತ್ತಲೆ ತುಂಬ ಆತ್. ಹೋಗಿನೇ ಮಕ್ಕಳೆ ಮೈಲಿ ಒಂದು ಹೆಡೆಗೆ ಮಣ್ಣ್ ಮೆತ್ತಿಕಂಡ್ ಕುದ್ದಳರಿ. ಬೇಗ ಹೋಗಿ ಮೀದ್ ಬನ್ನಿ ಅಯ್ಯೆ ಒಳಗೆಂದ ಕರ್ದ ಹೇಳ್ತ್.. ಮಕ್ಕ ಇಬ್ಬರೂ ಒಟ್ಟಿಗೆ ಎದ್ದ್ ಒಳಗೆ ಬೈರಾಸ್‌ಗೆ ಓಡ್ದೊ. ಹೈಸ್ಕೂಲಿಗೆ ಹೋದರೂ ಮಕ್ಕ ಇಬ್ಬರೂ ಈಗಳೂ ಒಟ್ಟಿಗೆ ಮೀಯೊದು. ಸಣ್ಮದರ್‌ಂದಲೆ ಅಭ್ಯಾಸಾದ ಮಕ್ಕ, ಇನ್ನ್ ಎಷ್ಟ್ ಸಮಯ ಒಟ್ಟಿಗೆ ಮೀದವೆಂತ ಗೊತ್ತಾದುಲೆ. ಅಜ್ಜ ಮಕ್ಕ ಹೋದ ಮೇಲೆ ನೆನ್ಸಿಕಂಡ್ ಹಾಂಗೆ ಎಲೆ ಅಡಿಕೆ ಗುದ್ದಿಕೆ ಶುರು ಮಾಡ್ದೊ.

* * * * *

ಕವನಗ :

# 'ಕಾಲ' ಶಾಶ್ವತ!

– ಬಾರಿಯಡ ಜೋಯಪ್ಪ

ಸೃಷ್ಟಿಯೊಟ್ಟಿಗೆ ಲಯ ಹುಟ್ಟಿಟು
ನಿಸರ್ಗ ನಿಯಮ ಮಾಡಿಟು
ಜೀವಕೋಟಿಗೆ 'ಕಾಲ' ಬಂದದೆ
ಕಾಲದೊಟ್ಟಿಗೆ ಕೂಡಿಕೆ
ಹೆಜ್ಜೆ ಹೆಜ್ಜೆಗೂ ಕಾಲ ಕಾದದೆ
'ಕೂಡಿ ಹೋಗುವ' ಬಯಕೆಗೆ

ಕರೆಯದಿದ್ದರೂ ಬಂದೇ ಬಂದದೆ
ಜಾಯಮಾನನೆ ಅಂಥದ್
ಗಾಳಿ ಬೆಳ್ಕ್‌ಗೆ ರೂಪ ಇಲ್ಲೆ
ಕಾಲ ಇರ್ದೂ ಹಂಗೆನೆ
ಜೀವಜಾಲ ಹುಟ್ಟಿ ಸತ್ತದೆ
'ಕಾಲ' ಮಾತ್ರ ಶಾಶ್ವತ!

ಮೇಲ್ ಕೀಳ್ ಅದ್ಕೆ ಇಲ್ಲೆ
ಜಾತಿ ಧರ್ಮದ ಕಟ್ಟ್ ಇಲ್ಲೆ
ಹಿರಿಯ ಕಿರಿಯರ್ ಲೆಕ್ಕಕಿಲ್ಲೆ
ಎಲ್ಲ ಸಮ ಸಮ ಕಂಡದೆ

'ರಸ'ನ ಹೀರ್ದ್ 'ಕಸನ' ಬುಟ್ಟದೆ
ಮಾಯಶಕ್ತಿ ಅದರ್‌ದ್
ಕಾಲದೊಟ್ಟಿಗೆ ತೇಲಿ ಹೋಕು
ನಿಯಮ ಇರ್ದೇ ಅಂಥದ್

ಕಾಲ = ಯಮ ,
(ಮದುವೆಗದ್ದೆ ದಿ. ಬೋಜಪ್ಪ ಗೌಡರಿಗೆ ಇದ್ ಅರ್ಪಣೆ)

* * * * *

# ನಾವು ಯಾರಿಗೂ ಕಮ್ಮಿ ಇಲ್ಲೆ

– ಕೊಟ್ಟಕೇರಿಯನ ಲೀಲಾ ದಯಾನಂದ

ಹತ್ತ್ ಕುಟುಂಬ, ಹದಿನೆಂಟು ಗೋತ್ರದ ನಾವು ಯಾರಿಗೆ ಕಮ್ಮಿ ಇಲ್ಲೆ
ನಮ್ಮಲ್ಲಿ ಒಗ್ಗಟ್ಟಿದ್ದರೆ ಯಾರಿಗೂ ಸೋಲಿಸಿಕೆ ಆಕೀಲೆ

ದೇಶದ ಬೆನ್ನು ಮೂಳೆಂತೇಳುವ ಬೇಸಾಯ ನಮ್ಮ ಕುಲಕಸುಬಾಗಿ ಉಟ್ಟು
ಸತ್ಯ, ಧರ್ಮ, ಶಾಂತಿ, ಪ್ರೇಮ, ಧೈರ್ಯ, ಶೌರ್ಯ ನಮ್ಮ ರಕ್ತಲಿ ಬಂದುಟ್ಟು

ಗುಡ್ಡೆಮನೆ ಅಪ್ಪಯ್ಯ ಗೌಡ, ಕೆದಂಬಾಡಿ ರಾಮಗೌಡ ದೇಶಕ್ಕಾಗಿ ಹೋರಾಡ್ದೊ
ಬಿಳಿ ತೊಗಲ್‌ನವರ ಬೆರ್‌ಸಿ ಬಾವುಟ ಗುಡ್ಡೆಲಿ ರಾಷ್ಟ್ರ ಧ್ವಜ ಹಾರಿಸಿದ್ದೊ.

ಕುರುಂಜಿ ವೆಂಕಟರಮಣಗೌಡ,
ದೇವರಗುಂಡ ಸದಾನಂದ ಗೌಡ ನಮ್ಮ ಗೌರವನ ಹೆಚ್ಚಿಸಿದೊ
ನಮ್ಮ ಜನಂಗ ಎಲ್ಲದರ್‌ಲೂ ಹುಷಾರ್ ಎಂದ್ ತೋರಿಸಿದೊ

ಆಚಾರ, ವಿಚಾರ, ಸಂಸ್ಕೃತಿನ ನಾವು ಬಟ್ಟಿತ್‌ಲೆ
ಗುರು ಕಾರ್ನೂರು, ದೈವ, ದೇವರ್‌ಗಳ ನಾವು ಎಂದಿಗೂ ಬುಡಿಕಿಲೆ.

ಇನ್ನೊಬ್ಬಂಗೆ ನಾವು ಎಂದಿಗೂ ತೊಂದರೆ ಮಾಡ್‌ದುಲೆ
ನಮ್ಮ ಉಪದ್ರಕೆ ಬಂದರೆ ನಾವು ಯಾರ್‍ನೂ ಬುಡುದುಲೆ

ನಮ್ಮಲ್ಲಿ ಒಗ್ಗಟ್ಟು ಉಟ್ಟು, ಅರೆಭಾಷೆ ಬಾರೀ ಲಾಯಿಕ್ ಉಟ್ಟು
ನಮ್ಮ ಸೇರಿಸಿಕೆ ಗೌಡ ಯುವ ಸೇವಾ ಸಂಘ ಹರ್‌ಕೆ ಹೊತ್ತುಟ್ಟು

ಶಾಲೆ ಮಾಡ್ದೊ, ಬ್ಯಾಂಕ್ ಮಾಡ್ದೊ,
ಸಮಾವೇಶ ಮಾಡ್ದೊ, ಮೊದುವೆ ವೇದಿಕೆನೂ ಮಾಡ್ದೊ
ನಲವತ್ತೇಳು ಗ್ರಾಮಲಿ ಎಲ್ಲರ ಸೇರಿಸಿಕಂಡ್ ಸಂಘನ ಬೆಳ್‌ಸಿದೊ

ಸುಳ್ಯಲಿ ಈಗ ಗೌಡ ಸಮುದಾಯ ಭವನ ಕಟ್ಟ್‌ತಾ ಒಳೊ
ನಮ್ಮ ಎಲ್ಲ ಜನರ ಸಹಕಾರ ಕೋರ್‍ತಾ ಒಳೊ

ಶೃಂಗೇರಿ, ಆದಿಚುಂಚನಗಿರಿ ಸ್ವಾಮಿಗಳ ಆಶೀರ್ವಾದ ಉಟ್ಟು
ಕುಲದೇವ ವೆಂಕಟರಮಣನ ಅನುಗ್ರಹ ಸದಾ ಉಟ್ಟು

ನಮ್ಮಲ್ಲಿ ಇರುವ ಕೆಟ್ಟದರ ಬುಟ್ಟು
ಮುಂದೆ ಹೋಕು ನಾವು ಈಡೊಂದರ ಇಟ್ಟ್

* * * * *

# ಶಕುನದವನ ಪಟ್ಟಿ

– ಕುತ್ಯಾಳ ನಾಗಪ್ಪ ಗೌಡ (ಕಿರಣ)

ಒಬ್ಬಂಗೊಬ್ಬ ಬೇಕೇ ಬೇಕು;
ತಬ್ಬಿಕೊಂಬಕೂ ಇಬ್ಬರ್ ಬೇಕು;
ಒಬ್ಬನೆ ಇದ್ದರೆ ದಿಬ್ಬಣವಾಗದ್,
ಸುಬ್ಬನ ವಾಲಗ ಬೇಕು!

ಕಬಡ್ಡಿಯಾಡಿಕೆ ರೈಡರ್ ಬೇಕು;
ದಾಂಡಿಗನೆದುರಿಗೆ ಬೌಲರ್ ಬೇಕು;
ಗುದ್ದಾಟಕ್ಕೂ ಇಬ್ಬರ್ ಬೇಕು,
ಗೆಲ್ಲೋಕಾದ್ರೆ ಸೋಲೋಂವ ಬೇಕು!

ಸುಳ್ಳನ ಗೆಲಿಸಿಕೆ ನಂಬೊಂವ ಬೇಕು;
ನಟನೆಯ ಖ್ಯಾತಿಗೆ ಭಕ್ತರ್ ಬೇಕು;
ಕಷ್ಟ ಬಂದರೆ ಕಣ್ಣೀರೊರಸಿಕೆ,
ಭ್ರಷ್ಟಚಾರಿಗೆ ನಿಷ್ಠರ್ ಬೇಕು!

ತಯಾರಿಸೊವ್ಕೆ ಮಾರೊಂವ ಬೇಕು;
ಮಾರಾಟಕ್ಕೆ ತಕೊಂಬಂವ ಬೇಕು;
ಅಡಿಗೆಯ ಮಾಡಿಕೆ ಪಂಡಿತ ಬೇಕು,
ಮಾಡಿರೆ ಸಾಲದ್, ಉಂಬೊಂವ ಬೇಕು
ಒಬ್ಬಂಗೊಬ್ಬ ಬೇಕೇ ಬೇಕು.

ಕಾಡಿಗೆ ಕಳ್ಸಿಕೆ ಕೈಕೆಯಿ ಬೇಕು;
ಅಣ್ಣನ ಹಿಂದೆ ತಮ್ಮನು ಬೇಕು;
ಸೇತುವೆ ಕಟ್ಟಿಕೆ ಸಣ್ಣವು ಬೇಕು;
ಸ್ನೇಹಿತ ಬೇಕು; ವೈರಿಯು ಇದ್ದದೆ
ರಾಮಾಯಣಕೆ ರಾವಣ ಬೇಕು!

* * * * *

# ಬೆಳ್ದಿಂಗೊಳು

– ಬಿ.ಆರ್ ಉಮೇಶ್ ಬಿಳಿಮಲೆ

ಬಿ.ಆರ್ ಉಮೇಶ್ ಬಿಳಿಮಲೆ
ತಿಂಗೊಳು ಮೂಡುಟ್ಟುಯಾ
ಅಂಗಳ ತುಂಬುಟ್ಟುಯಾ
ಹನಿ ಹನಿ ಬಿದ್ದ ಬೆಳ್‌ಕ್ ರಾಶಿ
ಹೊರಗೆ ಹರ್ರುಗಟ್ಟುಯಾ..

ಅಂಗಳ ಹೊರಗೆ ಹಾಕಿದ ಬೇಲಿಲಿ
ಮಲ್ಲಿಗೆ ಬಳ್ಳಿ ಮಲ್ಗಿತ್ತ್
ಮಿಣುಕು ಮಿಣುಕು ಬೆಳ್ಳನೆ ಹೂವು
ಪರಿಮಳ ಹಾಸಿಗೆ ಹಾಸಿತ್ತ್

ಅವ್ವ ಹೊರಗೆ ಚಿಂಟೆಲಿ ಕುದ್ದು
ಅಕ್ಕಿ ಹರ್ರುಗಟ್ಟಯಾ
ತಿಂಗಳ ಬೆಳಕಿಗೆ ಅಕ್ಕಿಯು ನಾಚಿ
ಗುಡ್ಡೆ ಆಗುಟ್ಟುಯಾ

ಹನಿ ಹನಿ ಪುಟ್ಟ ಹೆಜ್ಜೆಯ ಹಾಕಿ
ಪುಟ್ಟಿ ಬಂದುಟ್ಟುಯಾ
ಅರಳಿದಾ ಕಂಣಾ ಬೆರಗಾ ನೋಡಿ
ತಿಂಗೊಳು ತಾನೇ ನಾಚುಟ್ಟು

ಪುಟ್ಟಿಯಾ ಹುಡುಕೀ ಸೋತ ಅಪ್ಪ
ಮೆಲ್ಲನೇ ತಾನು ಬಂದುಟ್ಟು
ಜೊತೆಗೇ ಬಂದ ನವಿರುಗಾಳಿ
ಘಮನ ತುಂಬಿ ಬಾಗಿತ್ತ್
ಬೆಳ್ಳನೆ ನಗೆಯ ಹೂವನು ಚೆಲ್ಲಿ
ಮಗಳು ಭುವಿಯು ಮಲಗಿತ್ತ್ ॥

* * * * *

# ಕೋಲಾಟದ ಹಾಡು

– ಬಿ.ಆರ್ ಉಮೇಶ್ ಬಿಳಿಮಲೆ

ಓ. ಅಕ್ಕ ಬನ್ನಿ ಇಲ್ಲಿ
ಅತ್ತೇ ನೀವು ಕುದ್ರಿ ಇಲ್ಲಿ
ತಮ್ಮಾ ಅಲ್ಲೇ ನಿಲ್ಲಪ್ಪಾ
ಅಂಣಾ ನೀ ಬಾರಪ್ಪ
ಮಾವ ಯಾಕೆ ನಿಂತರಿ? ಹಂಗೆ ಸ್ವಲ್ಪ ಕೇಳ್ಕನಿ ॥ಪ॥

ಈಗ ನಾನು ಹೇಳ್ನೆ
ವಿಷ್ಯ ನೀವ್ಗೆ ಗೊತ್ತುಟೋ?!
ನಮ್ಮ ಭಾಷೆ ಅರೆಭಾಷೆ.. ನಾವ್ಗೆ ಎಲ್ಲ ಗೊತ್ತುಟು!
ನಮ್ಮ ಹುಟ್ಟು ಭಾಷೆ ಇದೆ,
ಅಜ್ಜ ಪಿಜ್ಜ, ಭಾಷೆ ಇದೆ
ಯಾವ ಭಾಷೆ ಏನೂ ಆದ್ರೂ.. ಮೊಸರೂನ ಕಡ್ದಂಗೆ!....

ಸದ್ದು ಗಿದ್ದು ಆದೆ ಗಡ
ಅತ್ತ ಇತ್ತ ಚೆಲ್ಲಿದೆ ಗಡ
ಮೊಸ್ರು ಕಡ್ದು ಮುಗೆಕನ.. ಮೊಜ್ಜಿಗೆ ಮಾತ್ರ ಇಲ್ಲೆಗಡ!
ಬೆಂಣೆ ಮಾತ್ರ ಅಲ್ಲೆ ಇಲ್ಲೇ
ಸುತ್ತು ಮುತ್ತ ಅಂಟುಟು
ಏನ್ ಸದ್ದು! ಏನ್ ಗುದ್ದು... ಬಂದವ್‌ಕೆಲ್ಲ ಗೊತ್ತಾತು!

ಬಂದವ್ಕೆಲ್ಲ ಬೆಂಣೆ ಹಂಚಿ
ಕಂಣು ಮುಚ್ಚಿ ಕುದ್ದದೆ
ಹೊಟ್ಟೆ ಚುರ್ ಚುರ್ ಹೇಳ್‌ಕನಾ
ತಂಣೀರ್‌ನಾ ಕುಡ್ದದೆ
ಹೊಟ್ಟೆ ಬಟ್ಟೆ ಗಂಡು ಕಟ್ಟಿ..... ಮೈಮುರ್ದು ದುಡ್ದ್‌ದೆ॥

ಬೆಂಣಿ ತಿಂದ ದೋಸ್ತಿಗೆಲ್ಲ
ಅರೆಭಾಷೆ ಗೊತ್ತಾತು!
ನಮ್ಮ ಭಾಷೆ ಅರೆಭಾಷೆ
ಅರ್ದು ಅರ್ದು ಕುಡ್ದ ಭಾಷೆ
ಅತ್ತ ಇತ್ತ ಹೋಕನ ಗಡ...... ಭಾಷೆ ಬಿತ್ತು ಹುಟ್ಟಿತ್ತು ॥

ಹೋಗುತ್ತೇನೆ ಹೋ...ನೆ ಆತ್
ಬರುತ್ತೇನೆ ಬನ್ನೆ ಆತ್
ತರುತ್ತೇನೆ ತನ್ನೆ ಆತ್
ಕಂಪ್ಯೂಟರ್ ಭಾಷೆ ನಮ್ಮೊದು
ಅರೆಭಾಷೆ.. SMS ಭಾಷೆ Ok Ok ಅಲ್ಲಯಾ॥

ಕನ್ನಡದ ಅವ್ವನೇ ನಮ್ಮ ಅಯ್ಯೆ ಅಲ್ಲಯಾ?
ಇದಕೆ ಸಂಶಯ ಮಾತ್ರ.... ನೀವ್ಗೆ ಖಂಡಿತಾ ಬೇಡಯಾ!
ನಮ್ಮ ಅವ್ವ ಸೇವೆ ಕೂಡಾ, ಅಯ್ಯೆ ಸೇವೆ ಹೌದೀಯಾ!
ತಾಯ ಭಾಷೆ ಅರ್ಧ ಆಗಿ....... ಅರೆಭಾಷೆ ಅಲ್ಲಯಾ?

ಕನ್ನಡಾಂಬೆ ಜರೀ ಸೀರೆ
ಒಂದು ನೂಲು ನಮ್ಮೋದು
ಬಂಣ ಹಂಞ ಕಮ್ಮಿ ಆದ್ರೆ
ಹಾಕೋ ಕೆಲ್ಸ.... ನಿಮ್ಮೋದು..

ಅರೆಭಾಷೆ... ನಮ್ಮ ಮಾನ
ಅರೆಭಾಷೆ. ನಮ್ಮ ಗೇನ
ಅರೆಭಾಷೆ ನೆಲದ ಭಾಷೆ... ಮಂಞಲೀ
ಕಾಪಾಡಮ್ಮ ಕನ್ನಡವ್ವ.. ನಿನ್ನ ಸೆರಗೀಲಿ ॥

* * * * *

# ಅಭಿಮಾನ

– ಲೋಕೇಶ ಕುಂಚಡ್ಕ

ನಮ್ಮೊದ್ ನಮ್ಮೊದ್ ಅರೆಕನ್ನಡ ಭಾಷೆ ನಮ್ಮೊದ್
ಏನ್ ಭಾವ, ಏನ್ ಅತ್ತಿಗೆ, ಏನ್ ಕುಂಞಪ್ಪ ತೇಳುವ
ಸಂಬಂಧ ಇರುವ ಭಾಷೆ ನಮ್ಮೊದ್.
ಎಲ್ಲೊವುಕು ಮರ್ಯಾದೆ ಕೊಟ್ಟು ಬದುಕೊವೊವು ನಾವು,
ನಾವು, ನಮ್ಮ ಜನ, ಸಂಪ್ರದಯ ಪಾಲಿಸೋವು.
ನಮ್ಮೊದ್ ನಮ್ಮೊದ್ ಇಡೀ ಸುಳ್ಯವೇ ನಮ್ಮೊದ್.
ಅನ್ಯಾಯ, ಅಸತ್ಯದ ವಿರುದ್ಧ ಹೋರಾಟ ಮಾಡುವೋವು.
ಸಿಕ್ಕುವ ಅಧಿಕಾರನ ಬುಟ್ಟು ಕೋಡಿಕಿಲೆ ನಮ್ಮೊವು.
ಎಲ್ಲರೊಟ್ಟಿಗೆ ಸೇರಿ ಒಗ್ಗಟ್ಟಿನ ಪ್ರದರ್ಶನ ಮಾಡೊವು.
ನಮ್ಮೊವು ನಮ್ಮೊವು ಅರೆಕನ್ನಡ ಗೌಡರ್ ನಮ್ಮೊವು.
ಪ್ಯಾಂಟ್, ಶರ್ಟ ನೋಡಿ ಮಣೆ ಹಾಕೋವು ನಮ್ಮೊವು.
ಬಿಸಿ ರಕ್ತದ ಬಿಸಿಲಿ ಹೋರಾಟ ಮಾಡೋವು
ರೋಡ್ಲಿದ್ದ ಕಲ್ಲುನ ಎಡ್ಗಿ ಬಿದ್ದೊವು ನಮ್ಮೊವು
ಬಿದ್ದಲಿಂದ ಸುಬಗರಂಗೆ ಹೋಗೋವು ನಮ್ಮೊವು
ಕಣ್ಣಿಗೆ ಕಂಡದ್ದರ ಪಡೆದೆ ಬುಡಿಕಿಲೆ ನಮ್ಮೊವು
ಗೋತ್ತಿಲದರ ಗೋತ್ತುಟು ತೇಳುವೋವು ನಮ್ಮೊವು
ಎಲಿ ಹೋದಲ್ಲಿ ಹುಲಿ ಹೊತ್ ತೇಳುವೊವು ನಮ್ಮೊವು
ಇವು ನಮ್ಮೊವು, ಇವು ನಮ್ಮೊವು.....
ಇವು ನಮ್ಮೊವು.

* * * * *

# ಬಪ್ಪೆ ಮಾತಾಡ್ತ ಉಟ್ಟು

– ಮಿಲನ್ ಎಂ

ಅಪ್ಪಿ ಹಿಡ್ಕಂಡ್ ಇದ್ದೆ ನನ್ನ ಯೌವನಲಿ
ಹಿಡಿತ ಸಡ್ಲಲಾಗುಟು. ಮುಪ್ಪು ಆವರಿಸಿಕಂಡುಟು
ಸಣ್ಣ ಗಾಳಿಗೆ ಹಿಡಿತ ತಪ್ಪಿ ನೆಲಕ್ಕೆ ದೊಪ್ಪೆಂದು ಬಿದ್ದೆ
ಮಣ್ಣಲಿ ಕರಗಿ ಗೊಬ್ಬರ ಆಗ್ತ ಇದ್ದೆನೋ ಏನೋ.
ವನದ ಹೊಟ್ಟೆ ಸೇರಿ ಗೊಬ್ಬರ ಆಗ್ತ ಇದ್ದೆನೋ.. ಏನೋ.
ಹಂಗೆ ಆತ್ಲೆ...... ಹೆಕ್ಕಿ ತಂದ ನನ್ನ ತೋಟಂದ
ಯಂತ್ರದೊಳಗೆ ಹಾಕಿ ಲಾಯಕ್ ಮಾಡ್ದ
ಹುಣ್ಣಿಮೆ ಚಂದ್ರನಂಗೆ ನಾನು ರೌಂಡು
ಒಳೆ ತಾ ಬಾರಿ ಖುಷಿ ಪಟ್ಟೆ, ನೆಗಾಡಿಕಂಡ್ ಇದ್ದೆ.
ಹೆತ್ತರೂ, ಸತ್ತರೂ, ಮದುವೆ ಇದ್ದರೂ ನನ್ನ ಕರೆತ್ತಿದ್ದ
ಖುಷಿ ಆತಿತ್ ನಂಗೋಸ್ಕರ ಜನ ಉದ್ದದ ಸಾಲ್‌ಲಿ ನಿಂತಿದ್ದ
ಜನರ ಕೈಗೆ ಕೊಡಿಕೆ ಮುಂದೆ ನೀರಿಲಿ ನನ್ನ ಮುಳುಗಿಸಿ ತೆಗ್ದ
ಉಪ್ಪು, ಹುಳಿ, ಖಾರ ಎಲ್ಲಾ ನನ್ನ ಮೇಲೆ ಹಾಕ್ತಾ ಇದ್ದ
ಜನರ ಬಾಯಿ ಸಿಹಿ ಮಾಡಿಕೆ ಹಾಕಿದೆ ನನ್ನ ಮೇಲೆ
ಬಿಸಿ ಬಿಸಿ ಪಾಯಸನ,
ನಿಮ್ಮ ಖುಷಿಗೆ ಸಹಿಸಿಕಂಡ್ ಸುಮ್ಮನೆ ಇದ್ದೆ ಈ
ಎಲ್ಲಾ ಆಯಾಸನ
ಮನಸ್ಸುಗೆ ತುಂಬಾ ಬೇನೆ ಆಗುತ್ತುಟ್ಟು, ನೀವು ಬಿಸಾಕಿದಿರಿ ನನ್ನ
ಮಾಡ್ದ ಉಪಕಾರನ ಮರ್‍ತು ಬಿಸಾಕಿದರಿ ನೀವು ನನ್ನ
ಬೀದಿ ನಾಯಿ ನೆಕ್ಕುತಾ ಉಟ್ಟು ನನ್ನ ಮೈಯನ್ನ
ಚಂದ್ರನಂಗೆ ಒಳೆ ತಾ ಖುಷಿ ಪಟ್ಕಂಡ್ ಇದ್ದ ನನ್ನ ಮೈಯನ್ನ
ಹೊತ್ತಾದರು ಈ ಗೊತ್ತಾತ್ ನಂಬಿಕಾಗದ್ ಈ ಮನುಷನ
ಅಂದ್ ತೋಟಲಿ ಇದ್ದಿದ್ದರೆ ನಾ ಮಣ್ಣಲಿ ಕರಗಿ ಹೋತಿದ್ದೆ
ಇಂದು ಕೂಡ ಅಷ್ಟೇ ನಾ ಮಣ್ಣಲಿ ಕರಗಿ ಹೋನೆ
ಮನ್‌ಸ್ಸುಗಾದ ನೋವುಲಿ ನಿನ್ನ ಒಂದು ಪ್ರಶ್ನೆ ಕೇಳ್ನೆ
ಲಾಯಕ್ ಮಾಡಿ, ಉಪಯೋಗಿಸಿ ಹೆರ್‌ಕಿಟ್ಟ ಯಾಕೆ ನನ್ನ
ಲಾಯಕ್ ಮಾಡಿ ಉಪಯೋಗಿಸಿ ಹೆರ್‌ಕಿಟ್ಟ ಯಾಕೆ ನನ್ನ

* * * * *

# ಅಣ್ಣಿನ ಗೊರ್ಕೆ

- ಭವಾನಿಶಂಕರ ಹೊದ್ದೆಟ್ಟಿ

ಅಣ್ಣಿನಾಂಗೆ ಗೊರ್ಕೆ ಹೊಡೆವು ಯಾರೂ ಎಲ್ಲೂ ಇರಿಕಿಲೇ।
ಅಣ್ಣಿ ಹೊಡಿವ ಗೊರ್ಕೆ ಕೆಬಿಲಿ ಕೇಳಿಕೆನೂ ಆಕಿಲೆ॥
ನಿದ್ದೆ ಬಂದ ಕೂಡ್ಲೆ ಅಣ್ಣಿ ಹೊಡಿದು ದೊಡ್ಡ ಗೊರ್ಕೆನ।
ಅಣ್ಣಿ ಗೂರುವ ಸದ್ದ್ ಕೇಳಿ ಬರ್ದೆ ಒಂದ್ ಹಾಡ್‌ನ॥

ಕತ್ತಲೆಗ ಮೊಲ್ಗುದಣ್ಣಿ ಅವನ ಮನೆ ಒಳೆಗೆನೆ।
ಬೇರೆ ಮನೆಲಿ ಮೊಲ್ಗಿರವರ ಕಷ್ಟ ಕೇಳಿ ಅವರನೆ॥
ಎಲ್ಲೋ ನೆಂಟ್ರ ಮನೆಗೆ ಹೋಗಿ ನಿತ್ತರಾ ಮನೆಲಿನೆ।
ಮನೆ ಜನಂಗ ಅಂದ್ ಯಾರು ನಿದ್ದೆ ಮಾಡಟಿಲ್ಲೆನೆ॥

ಅಣ್ಣಿನ ಗೊರ್ಕೆ ಸದ್ದ್ ಕೇಳಿರೆ ಜನಂಗ ಹೆದ್‌ರಿ ನಡ್ಗುವೊ।
ಭೂಕಂಪ ಆದೆಂತೇಳಿ ಮನೆಂದ ಹೊರೆಗೆ ಓಡುವೊ।
ಎಂತ ನಿದ್ದೆ ಎಂತಾ ಗೂರ್ ಬೊಳ್ಬುಗೆದ್ದ್ ಕೇಳುವೊ।
ಸಣ್ಣ ಮಕ್ಕ ಇರುವ ಮನೆಲಿ ಮಕ್ಕ ಹೆದ್‌ರಿ ಮರ್ದುವೊ॥

ಗೊರೊ ಗೊರಾಂತ ಸದ್ದ್ ಮಾಡಿ ಅಣ್ಣಿ ಉಸ್‌ರ್ ಎಳ್ದದೆ।
ಬರ ಬರಾಂತ ಸದ್ದ್ ಮಾಡಿ ಉಸಿರ್ ಹೊರೆಗೆ ಬುಟ್ಟದೆ।
ಅವನ ಮೈಗೆ ಎಂತೊ ದೆವ್ವ ಸೇರಿಟುಂತ ಹೇಳಿವೆ।
ಮಂತ್ರವಾದಿ ಕರ್ಸಿ ಗುಣ ಪಡ್‌ಸ್‌ತೇಳಿ ಬ್ಯೊದವೆ।

ಸೀನನ ಗೊರ್ಕೆ ಸದ್ದ್ ಕೇಳ್ರೆ ಬ್ಲೆಡ್ಡ್ ಶುಗರ್ ಏರುದು।
ಹೆದ್‌ರಿ ಒಳೆಗೆ ಹಾರ್ಟ್ ಕೂಡ ದಡಬಡಾಂತ ಹಾರುದು।
ಪಕ್ಕಲಿ ಮೊಲ್ಗಿದವನ ಪಿತ್ತ ನೆತ್ತಿವರೆಗೆ ಏರುದು।
ಮನೆಲಿ ಇದ್ದ ನಾಂಯಿ ಕೂಡ ಮನೆನ ನೋಡಿ ಬೊಗಳುದು॥

ಅಣ್ಣಿನಾಂಗೆ ಗೊರ್ಕೆ ಹೊಡೆವು ಇರಿಕೆ ಬೊತ್ತ್ ಊರ್‌ಲಿ
ಅಂತವೆಲ್ಲ ಮೊಲ್ಗೊಕು ಒಳ್ಳೆ ಫಸಲ್ ಬರುವ ತೋಟಲಿ॥
ತೋಟದೊಳಗೆ ಪಾರಕವ ಮೊಲ್ಗಿರೆನೆ ಒಳ್ಳದ್।
ಕದ್ದ್ ಹೀಕಿಲೆ ಏನೂ ಕೂಡ ತೋಟದೊಳೆಗೆ ಬೆಳ್ದದ್॥

ಅಣ್ಣಿಗೆ ಪ್ರಾಯ ಹೆಚ್ಚೇನಿಲ್ಲೆ ಆದ್ ಇಪ್ಪತೆಂಟೆನೇ।
ಮೊದುವೆ ಇನ್ನು ಆತ್‌ಲವಂಗೆ ಮನೆಗೆ ಮಂಜ ಒಬ್ಬನೇ
ಅವನ ಗೂರ್ ಕೇಳಿರವಂಗೆ ಹೆಣ್ಣ್ ಯಾರು ಕೊಡಿಕಿಲೆ
ಮೊದುವೆ ಆದರೆ ಹೆಣ್ಣ್ ಮನೆಂದ ಓಡಿ ಹೋಗದಿರಿಕಿಲೆ॥

ನಿದ್ದೆ ಮಾಡಿ ಗೊರ್ಕೆ ಹೊಡ್ದವೆ ಹೆಚ್ಚಿನೆಲ್ಲ ಮನೆಲಿನು।
ಮಾಯ್ಪುಲಿ ಜಾಲ್ ಗುಡಿಸಿದಾಂಗ್ದೆ ಸದ್ದ್‌ಬಾದು ಅಲ್ಲಿನು।
ಅಂತ ಸಣ್ಣ ಗೊರ್ಕೆ ಹೊಡೆವ ಅಣ್ಣಿ ಅಲ್ಲ ಎಂದಿಗು।
ಅಣ್ಣಿನ ಗೊರ್ಕೆ ಕೇಳಿದವ ಮರೆಕಿಲೆ ಎಂದೆಂದಿಗೂ॥

ಬೇಕುಂತೇಳಿ ಯಾರೂ ಗೊರ್ಕೆ ಹೊಡೆಟ ಇಲ್ಲೆ ಕಂಡಿತ।
ಗೊರ್ಕೆ ಹೊಡಿದು ಯಾಕೆ ಕೇಳಿ ಹೇಳುವವನೆ ಪಂಡಿತ।
ಗೊರ್ಕೆ ಹೊಡಿದು ತೊಪ್ಪುಂತೇಳಿ ಹಾಡ್ ನಾನ್ ಬರ್ತ್‌ಲೇ।
ಹಾಡ್ ಬರೆಕೆ ಹೊರ್ಡಿಕಾಕನ ವಿಷಯ ಬೇರೆ ಸಿಕ್ತ್‌ಲೆ

* * * * *

# ಹುತಾತ್ಮ ಅಪ್ಪಯ್ಯ ಗೌಡ

– ಕೊಟ್ಟಕೇರಿಯನ ಲೀಲಾ ದಯಾನಂದ

ಹತ್ತ್ ಕುಟುಂಬದ ಹೆಮನ ಗೋತ್ರಲಿ
ಬಲಮುರಿ ಗ್ರಾಮಲಿ, ಗುಡ್ಡೆ ಮನೇಲಿ
ಪಂಡ್‌ಲಿ ಸುಬ್ಬಪ್ಪ ಗೌಡ್ರ ಮಂಜನಾಗಿ
ಅಪ್ಪಯ್ಯ ಗೌಡ ಇಂದೂ ಒಳೊ ಹುತಾತ್ಮ ಯೋಧನಾಗಿ॥

ಗಟ್ಟಿದೇಹ, ಜಟ್ಟಿ ಮೀಸೆ ಬುಟ್ಟ್‌ಕಂಡ್
ಕುಪ್ಪಸದಟ್ಟಿ ಕಟ್ಟ್ ರುಮಾಲ್ ಸುತ್ತಿಕಂಡ್
ದಿಟ್ಟ ಕುದುರೆಲಿ ಖಡ್ಗ ಹಿಡ್ದ್ ಕುದ್ದ್‌ಕಂಡ್
ಕೊಡಗ್ ನಾಡ್‌ಲಿ ಕ್ರಾಂತಿದೀಪ ಬೆಳ್ಗಿಕಂಡ್॥

ಆದೊ ಅಂದ್ ಕೊಡಗ್‌ನ ಜಮೇದಾರ
ಮಾಡ್‌ದೊ ಪರಂಗಿಗ ಸುಳ್ಯದ ಸುಬೇದಾರ
ದುಡ್‌ದ್ ತಿಂಬ ರೈತಂಗೆ ಬೀತ್ ಕಂದಾಯ
ನೆಮ್ಮದಿ ಹಾರ್ತ್‌ಗಡ, ಕುಸಿ ಆತ್ ಮಾಯ॥

ಸ್ವಾಭಿಮಾನ ಇತ್ತ್ ಗೌಡ್ರ ನೆತ್ತರ್‌ಲಿ
ಉಂಡ ಅನ್ನ ಸೇರ್ತ್‌ಲೆ ಗುಲಾಮಗಿರಿಲಿ
ವಕ್ಕರ್ಸ್‌ದ ಬೆಳಿ ಮನ್‌ಸರ ಓಡ್ಸೊಕೂಂತ
ಮಾಡ್ದೊ ಸಂಕಲ್ಪ ಮನ್ಸ್‌ಲಿ, ಶೂರ ಮನ್‌ಸ॥

ಹೊರಟತಂದ್ ವೀರ ಸೈನ್ಯ ಪಿಜಿನ್‌ನಂಗೆ
ಅಮರ ಸುಳ್ಯಲಿ ಸುರುವಾತ್ ಸುರೂನ ದಂಗೆ
ಪರ್‌ದೇಸಿಗ ಕರ್‍ದೊ ಇದ್‌ನ 'ಕಾಟಕಾಯಿ'
ಹೆಡ್ಡ ಜನಗ ನಂಬಿ ಬುಟ್ಟೊ ಬಾಯಿ ಬಾಯಿ॥

ಎಂಜಲ್ ನಾಯಿಗಳ್ದೆ ಕುರ್ತೆಲು ಹುನ್ನಾರ
ಲಗಾಡಿ ತೆಗ್ತ್ ವೀರಂಗಳ ಗತ್ತ್ ಅಬ್ಬರ
ಕೊಟ್ಟೊ ಪರಂಗಿಗ ಸೀಂತ್ರಿಗಳ್ಗೆ ಭಿಕ್ಷೆ
ದೇವ ಕೊಡ್ದುಲೆನಾ ಕುತಂತ್ರಿಗಳ್ಗೆ ಶಿಕ್ಷೆ?

ಸ್ವಾತಂತ್ರ್ಯದ ಕನ್‌ಸ್‌ಲಿ ಘರ್ಜಿಸಿತ್ ಸಿಂಹ
ಹೆದರ್‌ತ್‌ಲೆ ಆಪತ್ತಿಗೆ ಭಾರತಾಂಬೆನ ಮಂಜ
ಹಬ್ಬಿತಂದ್ ಕ್ರಾಂತಿಕಿಡಿ ಕಾಡ್ಗಿಚ್ಚಿನಂತೆ
ಬೇಂಗನಾಡ್, ನಾಲ್ಕ್‌ನಾಡ್, ತಾವ್‌ನಾಡ್‌ಲಿ ಹಿಂಗೆ

ಕೋವಿ ಹಿಡ್‌ದ್ ನಡ್‌ದೊ ಗೌಡ್ರು ಮುಂದೆ ಮುಂದೆ
ದಾಪುಗಾಲ್ ಇಟ್ಟೊ ಜನಗ ಅವ್‌ರ ಹಿಂದೆ
ತುಂಬಿದೊ ಮದ್ದ್‌ನ, ಕೇಪುನ ಕೋವಿಗೆ, ಸ್ವಾಮಿ ಭಕ್ತಂಗ
ಮಿಂಚ್‌ನಂಗೆ ಸಿಡ್‌ದ್ ನಿಂತೊ ವೀರಯೋಧಂಗ॥

ಹಾರ್‌ತ್ ಪೋರ್ಲುನ ಬಾವುಟ, ಬಾವುಟ ಗುಡ್ಡೆಲಿ
ಕೆಕ್ಕರ್ಸಿದೊ ಪರಂಗಿಗ ಕೊರ್‌ಗಿ ಸಂಕಟಲಿ
ಒಡ್‌ದ್ ಆಳ್‌ವ ನೀತಿ ತಂದೊ ಹುಳ್ಕ ಕಪಟಿಗ
ಹಿಡ್‌ದೊ ಮಹಾದಂಡನಾಯಕನ ಹಲ್ಕ ಷಡಂಗ॥

ಕೊನೆಗಳ್‌ಗೆಲಿ ಕುಲದೇವ್ರುನ ಗ್ಯಾನಮಾಡ್ದೊ
ತಲೆಯೆತ್ತಿ ಹಡ್‌ದವ್ಕೆ ಕೈನ ಮುಗ್‌ದೊ
ಗಂಡ್‌ಗಲಿನ ಹೆತ್ತ ಒಡಲ್ ಧನ್ಯ ಆತ್
ಕೋಟೆ ಬಾಗ್‌ಲ್ ಈ ಕ್ಷಣಕೆ ಸಾಕ್ಷಿ ಆಗೋತ್॥

ತೂಗಿದೊ ವೀರನಂದ್ ನೇಣುಗಂಬಕೆ
ಸೇರ್ದೊ ನೋಡಿ ಅಪ್ಪಯ್ಯ ಗೌಡ್ರು ಸೀದ ಸ್ವರ್ಗಕೆ
ಹಿಂಡ್- ಹಿಂಡ್ ಜನಗ ಬಂದೊ, ನೋಡಿ ಮರ್‌ಡಿಕೆ
'ಬಲಿದಾನ' ನಾಂದಿಯಾತ್ ಸ್ವತಂತ್ರ ಭಾರತಕೆ॥

ಉಸ್‌ರ್ ನಿತ್ತರೂ ಹೆಸ್‌ರ್ ಉಳ್‌ತ್
ಕ್ರಾಂತಿ ಕಹಳೆ ಮೊಳ್‌ಗಿತ್
ಗಂಡ್ ಮೆಟ್ಟಿದ ನಾಡ್ ಕೊಡಗ್‌ಲಿ
ಗೌಡ್ರ ಹೆಸ್‌ರ್ 'ಅಮರ' ಆತ್॥

ಇಂಥ ಎಷ್ಟೋ ನಾಡ ಹಿರಿಯವು
'ವೀರ ಮರಣ' ಪಡ್‌ದೊಳೊ
ಅವರ ಗ್ಯಾನಲಿ ಋಣದ ಭಾರಲಿ
ನಾವ್ ಜೀವನ ನಡ್‌ಸಿಯೊಳೊ

* * * * *

ಸೋಬಾನೆ:

# ಆರತಿ ಹಾಡು

-ಎಂ.ಜಿ. ಕಾವೇರಮ್ಮ

ಸೋಬಾನೆ ಸೋಬಾನೆ
ಸೋಬಾನೆ ಹೇಳೊಮೊ
ಕೃಷ್ಣ ಪರಮಾತ್ಮಂಗು
ರುಕ್ಮಿಣಿ ದೇವಿಗು
ಸೋಬಾನೆ ಸೋಬಾನೆ
ಸೋಬಾನೆ ಹೇಳೊಮೊ ॥1॥ ಸೋಬಾನೆ

ಹೊಳ್ಯವ ಮಣಿಗಳ
ಚಿನ್ನದ ಪೀಠಲಿ
ರಾಜ, ರಾಣಿನ ಹಾಂಗೆ
ಮೊದ್ಮಕ್ಕ ಕುದ್ದೊಳೊ
ಪಟ್ಟೆ ಸೀರೆನ ಉಟ್ಟ್
ತಟ್ಟೆಲಿ ಆರತಿ ಬೆಳ್ಗಿ
ಮುತ್ತಿನಾರತಿನಾ ಬೆಳ್ಗೋಮೊ ॥2॥ ಸೋಬಾನೆ

ಚಿನ್ನದ ಹರಿವಾಣಲಿ
ಕುರ್ದಿ ನೀರ್‌ನ ತುಂಬಿ
ದಳಿಯದ ನೆಣೆ ಹೋಸಿ
ಆರತಿ ಬೆಳ್ಗೊಮೊ
ಪಟ್ಟೆ ಸೀರೆನ ಉಟ್ಟ
ಮುತ್ತೈದೆ ಹೆಣ್ಮಕ್ಕ
ಚಿನ್ನದಾರತಿನಾ ಎತ್ತೋಮೊ ॥3॥ ಸೋಬಾನೆ

ಹವಳದ ತಟ್ಟೆ ತುಂಬ
ಅಕ್ಕಿನ ತುಂಬಿಕಂಡ್
ಮುತ್ತೈದೆ ಹೆಣ್ಮಕ್ಕ ನಾವು
ಆರತಿ ಬೆಳ್ಗೊಮೊ
ಅಕ್ಕಿನಾರತಿನಾ ಎತ್ತೋಮೊ ॥4॥ ಸೋಬಾನೆ

## ಆರತಿ ಹಾಡ್

ಆರತಿ ಎತ್ತಿನಿ ಗೂಡೆಗೆ ಎಲ್ಲಾ
ಮಾರ, ಸುಂದರ, ಸುಕುಮಾರಂಗೆ
ಅವ್ವಂಗೆ ಬಾಯಿಲಿ ಮೂರ್ಲೋಕ ತೋರ್ಸಿದ
ಸುರ ಸುಂದರಾಂಗ ಶ್ರೀಕೃಷ್ಣಂಗೆ
ಆರತಿ ಎತ್ತಿನಿ ಗೂಡೆಗ ಎಲ್ಲಾ
ಮಾರ ಸುಂದರ ಸುಕುಮಾರಂಗೆ ॥1॥

ಶಕಟ, ಧೇನುಕರಾ ಸೊಕ್ಕುನ ಮುರ್ದ
ಮಾಂವ ಕಂಸನ ಕೊಂದ ವೀರಂಗೆ
ಕಾಳಿಂಗ ಸರ್ಪನ ಮರ್ದನ ಮಾಡಿ
ಬಾಲ ಗೋಪಾಲರ ಕಾಪಾಡಿದಂವಂಗೆ
ಆರತಿ ಎತ್ತಿನಿ ಗೂಡೆಗ ಎಲ್ಲಾ
ಮಾರ ಸುಂದರ ಸುಕುಮಾರಂಗೆ ॥2॥

ಗೋಪಿ ಗೂಡೆಗಳಾ ಮೊನ್ಸ್‌ನ ಗೆದ್ದಾ
ಗೋಪಾಲಿಕೆಯರ ಬೆಣ್ಣೆನ ಕದ್ದಾ
ದ್ರೌಪದಿ ದೇವಿನ ಮಾನನ ಕಾದಾ
ಪಾರ್ಥಂಗೆ ಯುದ್ಧಲಿ ಸಾರಥಿಯಾದ
ಮೂರು ಲೋಕದ ಒಡೆಯ ಶ್ರೀಕೃಷ್ಣಂಗೆ
ಆರತಿ ಎತ್ತಿನಿ ಗೂಡೆಗ ಎಲ್ಲಾ
ಮಾರ ಸುಂದರ ಸುಕುಮಾರಂಗೆ ॥3॥

ನಂದಗೋಪನ ಮುದ್ದುಕಂದಂಗೆ
ಯಶೋದ ದೇವಿಯ ಬಾಲ ಮುಕುಂದಂಗೆ
ಸತ್ಯಭಾಮೆನ ಗಂಡಂಗೆ,
ರಾಧಾ ರಮಣ ಶ್ರೀ ಗೋವಿಂದಂಗೆ
ಆರತಿ ಎತ್ತಿನಿ ಗೂಡೆಗ ಎಲ್ಲಾ
ಮಾರ ಸುಂದರ ಸುಕುಮಾರಂಗೆ ॥4॥

* * * * *

## ಗಂಡಂಗೆ ಹೆಣ್ಣ್ ಎತ್ತುವ ಆರತಿ ಹಾಡ್

ಎತ್ತಿತ್ ಆರತಿನಾ ಶ್ರೀ ಸತ್ಯಭಾಮೆ
ಎತ್ತಿತ್ ಆರತಿನಾ
ಕತ್ತಲೆ ಜೈಲ್‌ಲಿ ಹುಟ್ಟಿದ ಕಂದಂಗೆ
ಬಾಲ ಮುಕುಂದಂಗೆ ಎತ್ತಿತ್ ಆರತಿನಾ ॥1॥

ಗೋಕುಲಲೀ ಬೆಳ್ದ ಗೋಪಾಲ ಕೃಷ್ಣಂಗೆ
ಕಾಳಿಂಗನಾ ಸೊಕ್ಕು ಮುರ್ದಂವಂಗೆ
ಬೆರ್ಳ್‌ಲಿ ಗೋವರ್ಧನ ಬೆಟ್ಟನ ಎತ್ತಿದಂವಗೆ
ಗೋಪ ಜನಾಂಗನ ಉದ್ಧಾರ ಮಾಡ್ದಂವಂಗೆ
ಶ್ರೀ ಸತ್ಯಭಾಮೆ ಎತ್ತಿತ್ ಆರತಿನಾ ॥2॥

# ಹಸೆ ಹಾಸುವ ಹಾಡ್'

-ಎಂ.ಜಿ. ಕಾವೇರಮ್ಮ

ಮುತ್ತಿನ ಹಸೆ ಹೊಸ ಮೊಂದ್ರಿನ ತಂದ್
ಐದ್ ಜನ ಕನ್ನೆಗ ಕೂಡಿಕಂಡ್
ಅಕ್ಕಿಲಿ ಬರ್ದ್ದಾ ರಂಗೋಲಿ ಮೇಲೆ
ತಿರುಪತಿ ತಿಮ್ಮಪ್ಪ ದೇವರ ನೆನ್ನಿ
ಮುತ್ತಿನ ಹಸೆ ಹೊಸ ಮೊಂದ್ರಿನ ನಾವು
ಹಸೇ ಹಾಸೂವೇ ಸೋಬಾನೆ ॥1॥

ಚಿನ್ನದ ಹಸೆ ಹೊಸ ಮೊಂದ್ರಿನ ತಂದ್
ಐದ್ ಜನ ಕನ್ನೆಗ ಕೂಡಿಕಂಡ್
ಅಕ್ಕಿಲಿ ಬರ್ದ್ದಾ ರಂಗೋಲಿ ಮೇಲೆ
ಶೃಂಗೇರಿ ಶಾರದೇ ದೇವಿನ ನೆನ್ನಿ
ಚಿನ್ನದ ಹಸೆ ಹೊಸ ಮೊಂದ್ರಿನ ನಾವು
ಹಸೇ ಹಾಸೂವೆ ಸೋಬಾನೆ ॥2॥

ವಜ್ರದ ಹಸೆ ಹೊಸ ಮೊಂದ್ರಿನ ತಂದ್
ಐದ್ ಜನ ಕನ್ನೆಗ ಕೂಡಿಕಂಡ್
ಅಕ್ಕಿಲಿ ಬರ್ದ್ದಾ ರಂಗೋಲಿ ಮೇಲೆ
ಸುಳ್ಯದ ಚೆನ್ನಕೇಶವ ದೇವರ ನೆನ್ನಿ
ವಜ್ರದ ಹಸೆ ಹೊಸ ಮೊಂದ್ರಿನ ನಾವು
ಹಸೇ ಹಾಸೂವೆ ಸೋಬಾನೆ ॥3॥

ಹವಳದ ಹಸೆ ಹೊಸ ಮೊಂದ್ರಿನ ತಂದ್
ಐದ್ ಜನ ಕನ್ನೆಗ ಕೂಡಿಕಂಡ್
ಅಕ್ಕಿಲಿ ಬರ್ದ್ದಾ ರಂಗೋಲಿ ಮೇಲೆ
ಧರ್ಮಸ್ಥಳ ಮಂಜುನಾಥ ಸ್ವಾಮಿನ ನೆನ್ನಿ
ಹವಳದ ಹಸೆ ಹೊಸ ಮೊಂದ್ರಿನ ನಾವು
ಹಸೇ ಹಾಸೂವೆ ಸೋಬಾನೆ ॥4॥

ಬೆಳ್ಳಿನ ಹಸೆ ಹೊಸ ಮೊಂದ್ರಿನ ತಂದ್
ಐದ್ ಜನ ಕನ್ನೆಗ ಕೂಡಿಕಂಡ್
ಅಕ್ಕಿಲಿ ಬರ್ದ್ದಾ ರಂಗೋಲಿ ಮೇಲೆ
ಸುಬ್ರಹ್ಮಣ್ಯ ಸ್ವಾಮಿ ದೇವರ ನೆನ್ನಿ
ಬೆಳ್ಳಿನ ಹಸೆ ಹೊಸ ಮೊಂದ್ರಿನ ನಾವು
ಹಸೇ ಹಾಸೂವೆ ಸೋಬಾನೆ ॥5॥

# 'ಹೆಣ್ಣ್ ಇಳ್ಸಿ ಕೊಡುವ ಹಾಡ್'

-ಎಂ.ಜಿ. ಕಾವೇರಮ್ಮ

ಹತ್ತ್ ಕುಟುಂಬದಾ
ಹದ್ನೆಂಟ್ ಗೋತ್ರದಾ
ಜಾತಿ ಬಾಂದವರೆದ್‌ರ್
ಹೆಣ್ಣಿಳ್ಸಿ ಕೊಟ್ಟಾವೆ ॥1॥

ನಮ್ಮ ಜಾಲ್‌ಲಿ ಬೆಳ್ದ
ಗುಡ್ಡು ಮೊಲ್ಲಿಗೆ ಹೂನ
ನಿಮ್ಮ ಮುಡಿಗಿಸಿಕೆಂತ
ತಂದೊಳಿಂದ್ ॥2॥

ತಕಣಿ ನೀ ಈ ಕೂಸ್ನ
ನಮ್ಮ ಮನೆ ಬೊಳ್ಪುನ
ನಿಮ್ಮ ಮನೆ ತುಂಬಿಸಿಕೆ
ಒಪ್ಪಿಸಿ ಕಣಿನಿ ॥3॥

ಮೋಸ, ವಂಚನೆ ಇದಕೆ
ಯಾಗೋಳು ಗೊತ್ತಿಲ್ಲೆ
ಕಪಟ-ಕೊಂಕ್‌ನ ಮಾತ್
ಮಾತಾಡಿಕಿಲ್ಲೆ ॥4॥

ಕಷ್ಟನೇ ಗೊತ್ತಿಲ್ಲೆ
ಕೊಂಡಾಟಲೀ ಬೆಳ್ದ
ಈ ಕೂಸ್ನ ನೀವ್‌ಗಿಂದ್
ನಾವು ಒಪ್ಪುಸುವೆ ॥5॥

ಸೊಂಪುಲೀ ಬೆಳ್ದ
ಗುಡ್ಡು ಮೊಲ್ಲಿಗೆ ಹೂವು
ಕಷ್ಟ, ನಷ್ಟಕೆ ಇದ್
ಬಾಡಿ ಹೋವಾ ಹೂವು ॥6॥

ಸುಖ, ದುಃಖಲೀ ಕೂಸು
ಎಲ್ಲ ಕಾಲಲಿ ನೀವ್ಗೆ
ಒಳ್ಳೆ ಹೆಸ್‌ರ್‌ನ ತಂದ್
ಮೊರ್‍ಯಾದೆ ಉಳ್ಸಿದೆ ॥7॥

ಹೊತ್ತ್ ಹೊತ್ತಿಗೆ ನಿಮ್ಮ
ಕೆಲ್ಸ ಕಾರ್ಯಲಿ ಎಲ್ಲ
ಒಂದಾಗಿ ಬೊದುಕಿ
ನೀವ್ಗೆ ಕೀರ್ತಿನಾ ತಂದದೆ ॥8॥

ನಿನ್ನ ಹೆಣ್ಣ್‌ನ ಕೈ ಹಿಡ್ದ್
ಸುಖವಾಗಿ ಇರ್ ಮಗನೆ
ನಿಮ್ಮ ಸೊಸೆ – ತಂಗೆಂತ
ತಿಳ್ದ್ ಕಣಿನಿ ॥9॥

ಸಂಸಾರ ಸಾಗರಲಿ
ಮೀಂದ್ ಮೇಲಕೆ ಬಾವ
ತಾಳ್ಮೆನಾ ಹೆಣ್ಣ್ ಇದ್
ಒಪ್ಪಿಸಿ ಕಣಿನಿ ॥10॥

ಇಂದ್‌ಂದ ಈ ಕೂಸು
ಯಾಗೋಳು ನಿಮ್ಮದೇ
ಪ್ರೀತಿ ತೋರಿಸಿ ಗೆಲ್ಲಿ
ಅವಳ ನೀವೆಲ್ಲಾ ॥11॥

ತೌರ್‌ಂದ ನೀ ಇಂದ್
ದೂರ ಹೋದೇ ಮಗಳೆ
ನಿನ್ನ ಮನೆ ಯಾಗೋಳು
ಗಂಡನಾ ಮನೆನೆ ॥12॥

ಗಂಡನೇ ದೇವುರು
ಬೇರೆ ದೇವುರು ಇಲ್ಲೆ
ಗಂಡನೆ ಇನ್ಮುಂದೆ
ನಿನ್ನ ಜೀವಾ ॥13॥

ಅತ್ತಿಗೆಕ ನಾದಿನಿಕ
ಅಕ್ಕ, ತಂಗೆಕ ನಿಂಗೆ
ಬಾವ- ಮೈದ್ನರ್ ಎಲ್ಲ
ಅಣ್ಣ- ತಮ್ಮಂದರ್ ॥14॥

# ಬಣ್ಣ ಬಂಗಾರ ಇಸಿಕನ ಹಾಡುವ ಸೋಬಾನೆ'

-ಎಂ.ಜಿ. ಕಾವೇರಮ್ಮ

ಜನಕ ರಾಜನ ಮಗಳ್ ಜಾನಕಿ ದೇವಿಗೆ
ಚಿನ್ನದ ಹರಿವಾಣಲಿ ಬಣ್ಣ ಬಂಗಾರ ತಂದ್
ಮುತ್ತೈದೆ ಹೆಣ್ಮಕ್ಕ ಸಿಂಗಾರ ಮಾಡಿಕೆ
ಸುರು ಮಾಡಿದೊ ಸೋಬಾನೆ ॥1॥

ಗಮಲ್‌ನ ಎಂಣೆನ ತಲೆತುಂಬ ಪೂಜಿ
ಬೆಳ್ಳಿ ಬಾಚಣಿಗೆಲಿ ಕೂದೊಲು ಬಾಚಿ
ನೆತ್ತಿನ ನೊಡುಲಿ ಬೊಗ್ತಲೆ ತೆಗ್ದ್
ಉದ್ದನೆ ಜಡೆ ಹಾಕಿ, ಜಡೆ ಗೊಂಡೆ ರಾಕುಟಿ
ಚಿನ್ನದ ತಲೆ ಹೂವು ಜಡೆ ತುಂಬ ಇಸಿದ್
ಮುತ್ತೈದೆ ಹೆಣ್ಮಕ್ಕ ಸಿಂಗಾರ ಮಾಡಿವೆ ಸೋಬಾನೆ ॥2॥

ಹುಣ್ಣಿಮೆ ಚಂದ್ರನಾ ಮೋರೆನ ಸೀತೆಗೆ
ಕಣ್ಣ್‌ಗೆ ಕಣ್ಣ್‌ಕೊಪ್ಪು, ಹಣೆಗೆ ಕುಂಕುಮ ಬೊಟ್ಟು
ಕೆನ್ನೆಗೆ ಅರ್ಸಿಣ, ಮೇಲೆ ದೃಷ್ಟಿ ಬೊಟ್ಟು
ಚುಕ್ಕಿನ ಇಟ್ಟ್, ಮುತ್ತೈದೆ ಹೆಣ್ಮಕ್ಕಾ
ಸಿಂಗಾರ ಮಾಡಿವೆ ಸೋಬಾನೆ ॥3॥

ಪಟ್ಟೆ ಕುಪ್ಪಸ ತೊಡ್ಸಿ, ದಾರೆ ಸೀರೆನ ಉಡ್ಸಿ
ಸೊಂಟಕೆ ಚಿನ್ನದ ಡಾಬುನ ಕಟ್ಟಿ
ಕುತ್ತಿಗೆ ತುಂಬಾ ಮುತ್ತು ರತ್ನದ ಹಾರ
ಚಿನ್ನದ ಪದಕಗ ಹೊಳೆವ ಮಾಣಿಕ್ಯ, ಮಾಲೆ ಸರಗ
ತೋಳಿಗೆ ತೋಳ್ಬಂದಿ, ನೆತ್ತಿ ಬೊಗ್ತಲೆ ಬೊಟ್ಟು
ಮುತ್ತೈದೆ ಹೆಣ್ಮಕ್ಕಾ, ಸಿಂಗಾರ ಮಾಡಿವೆ ಸೋಬಾನೆ ॥4॥

ಮೂಂಕಿಗೆ ಮೂಂಕುತಿ, ಕಾಲ್ಬೆರಳಿಗೆ ಕಾಲುಂಗ್ರ
ವಜ್ರದ ಕೆಬಿಯೋಲೆ, ಕೆನ್ನೆ ಸರ್ಪೋಳಿ ಕೋಸಿ
ಚಿನ್ನದ ಕಡಗಾ, ಕೈ ತುಂಬ ಬಳೆಗಾ
ಬೆರಳ್‌ಗೆ ಮುದ್ರೆನ ಉಂಗುರ ತೊಡ್ಸಿ
ಮುತ್ತೈದೆ ಹೆಣ್ಮಕ್ಕಾ, ಸಿಂಗಾರ ಮಾಡಿವೆ ॥5॥

ಮುಡಿಗೆ ಮಲ್ಲಿಗೆ ಮಾಲೆ, ಸುರಗಿ, ಸಂಪಿಗೆ ಹೂವು
ಅದರ ಮೇಲೊಂದು ಕೇದಗೆ ಹೂವು
ಅದರ ಮೇಲೊಂದು ಕೇದಗೆ ಹೂನ ಇಸಿದ್
ಪಿಂಗಾರದೆಸಳ್‌ನ ತಲೆತುಂಬಾ ಮುಡ್ಸಿ
ಬಂಗಾರದಂಚಿನ ಮುಸ್ಕುನ ಅರ್ವೆ ಹಾಕಿ
ಮುತ್ತೈದೆ ಹೆಣ್ಮಕ್ಕಾ ಸೀತಾದೇವಿನ
ಸಿಂಗಾರಾ ಮಾಡಿವೆ ಸೋಬಾನೆ ॥9॥

ಚೆಂದೊಳ್ಳೆ ಚೆಲುವೆ ಜನಕರಾಜನ ಮಗಳ
ದಾರೆ ಮಂಟಪಕೆ ಕರ್ಕಂಡ್ ಹೋಕೆ
ಮುತ್ತೈದೆ ಹೆಣ್ಮಕ್ಕಾ ಸಿಂಗಾರ ಮಾಡಿದೊ ॥7॥

# ಅರಶಿಣ- ಎಂಣ್ಣೆ ಹಾಡ್"

-ಎಂ.ಜಿ. ಕಾವೇರಮ್ಮ

ಮಿಥಿಲೆನ ರಾಜ, ಜನಕನ ಮಗಳ್
ಜಾನಕಿ ದೇವಿಗೆ ಎಂಣೆ – ಅರ್ಶಿಣ ಮಾಡಿಕೆ
ಮುತ್ತೈದೆ ಹೆಣ್ಮಕ್ಕಾ ಸಡ್ಗರಲಿ ಬಂದೊ ॥1॥

ಚಿನ್ನದ ಹರಿವಾಣಲಿ ಗಂಧದಾಂಗೆ ಅರ್ದ
ಹಸಿ ಅರ್ಶಿಣ– ಕಾಯೆಂಣೆ ಕಲ್ಶಿದ
ಅರ್ಶಿಣ ಎಂಣೆನ ಪೂಜಿಕೆ
ಮುತ್ತೈದೆ ಹೆಣ್ಮಕ್ಕಾ ಸಡ್ಗರಲಿ ಬಂದೊ ॥2॥

ಮೇಲ್ಕಟ್ ಕಟ್ಟಿದಾ ಚಪ್ಪರದಡಿಲಿ
ಮೂರ್ತದ ಮಣಿಕಟ್ಟಿ ಕುದ್ರಿಸಿದ ಸೀತೆಗೆ
ಅರ್ಶಿಣ ಎಂಣೆನ ಪೂಜಿಕೆ
ಮುತ್ತೈದೆ ಹೆಣ್ಮಕ್ಕಾ ಸಡ್ಗರಲಿ ಬಂದೊ ॥3॥

ಸರ್ಮಾಲೆ ದೀಪಕ್ಕೆ ಅಕ್ಕಿ ಹಾಕಿ ಕೈ ಮುಗ್ದ್
ಐದೆಲೆ ಒಂದಡ್ಕೆ ಬೊಗಸೆ ಮೇಲಿಟ್ಟ್
ಬೆಳ್ತಕ್ಕಿ ಸೇಸೆನ ಸೀತೆಗೆ ಹಾಕಿ
ಗರಿಕೆ ಹುಲ್ಲುಲಿ ಎಂಣೆನ ತೆಗ್ದ್
ಕೈಮೈಗೆ ತಾಂಗಿಸಿ ಕೈಮುಗ್ದ್
ಮೊದೊಳ್ಗೆ ಸೀತೆಗೆ ಅರ್ಶಿಣಾ ಹಚ್ಚುವೆ ॥4॥

ಬಾಳೆದಂಡ್‌ನ ಹಾಂಗಿದ್ದ ನುಣ್ಣನೆ ಕೈಗಳ್ಗೆ
ಅರ್ಶಿಣ – ಎಂಣೆನ ಮುತ್ತೈದೆ ಹೆಣ್ಮಕ್ಕ ಪೂಜಿವೆ ॥5॥

ಪೂರ್ಣ ಚಂದ್ರನ ಹಾಂಗೆ ಹೊಳ್ಳುವ ಮೋರೆಗೆ
ಅರ್ಶಿಣ – ಎಂಣೆನ ಮುತ್ತೈದೆ ಹೆಣ್ಮಕ್ಕ ಪೂಜಿವೆ ॥6॥

ಕಮಲದ ಹೂವುನ ಹಾಂಗಿದ್ದ ಪಾದಗಳಿಗೆ
ಅರ್ಶಿಣ – ಎಂಣೆನ ಮುತ್ತೈದೆ ಹೆಣ್ಮಕ್ಕ ಪೂಜಿವೆ ॥7॥

* * * * *

# ಗಂಗೆ ಪೂಜೆ

ಗಂಗೆ ಪೂಜೆನಾ ಮಾಡೊಮೊ ಬನ್ನಿ
ತಾಯಿ ಗಂಗವ್ವನ ಗುಂಬ ಪೂಜೆನಾ
ಮಾಡೊಮೊ ಬನ್ನಿ ॥1॥

ಗಂಗೆ– ಕಾವೇರಿ, ತುಂಗೆ– ನೇತ್ರಾವತಿ
ಸಿಂಧು– ಗೋದಾವರಿ, ನರ್ಮದ ನದಿನಾ

ಏಳ್ ಹಳ್ಳದ ನೀರ್ ಏಳ್ ಜನ ಕನ್ನೆಗ
ಏಳ್ ಗುಂಬಲಿ ತುಂಬಿ
ಗಂಗೆ ಪೂಜೆನಾ ಮೊಡೊಮೊ ಬನ್ನಿ
ತಾಯಿ ಗಂಗವ್ವನ ಗುಂಬ ಪೂಜೆ ಮಾಡೊಮೊ ॥2॥

ಶಿವನ ಮುಡಿಯೇರಿದ ತಾಯಿ ಗಂಗವ್ವನ
ಗುಂಬ ಪೂಜೆನ ಮಾಡಿಕೆ ಸಿಂಗಾರ ರಾಮನ
ಕರ್‌ಕಂಡ್ ಬನ್ನಿ ॥3॥

ಏಳ್ ಗುಂಬನ ತಂದ್, ಗಂಗೆ ನೀರ್‌ನ ತುಂಬಿ
ಚಾಳೆನ ಬುಡಲಿ ಸಾಲಾಗಿ
ಚಾಳೆನ ಬುಡಲಿ ಸಾಲಾಗಿ ಇಸಿದ್
ಗಂಗೆ ಪೂಜೆನಾ ಮಾಡೊಮೊ ಬನ್ನಿ
ತಾಯಿ ಗಂಗವ್ವನ ಗುಂಬ ಪೂಜೆ ಮಾಡೊಮೊ ॥4॥

ಚಾಳೆಗೆ ಏಳ್ ಸುತ್ತ್, ಏಳ್ ಮುತ್ತ್ಯೆದೆಗ
ಸುತ್ತೋಳು ಸುತ್ತಿ, ಗಂಗೆ ಪೂಜೆನಾ ಮಾಡೊಮೊ
ತಾಯಿ ಗಂಗವ್ವನ ಗುಂಬ ಪೂಜೆನ
ಮಾಡೊಮೊ ಬನ್ನಿ ॥5॥

ಚಾಳೆನ ಮರದಡಿಲಿ ಹೊಸ ಮೊಂದ್ರಿ ಹಾಸಿ
ಐದೆಲೆ ಕೊಡಿ ಬಾಳೆ ಸಾಲಾಗಿ ಇಸಿದ್
ಹೊದ್ಲ್ ಅವ್ಲು ಎಡೆ ಇಕ್ಕಿ, ಕದಳಿ ಬಾಳೆ ಹಣ್ಣ್
ಕಾಯೆ ಬೆಲ್ಲನ ಇಕ್ಕಿ, ಗಂಗೆ ಪೂಜೆನಾ
ಮಾಡೊಮೊ ಬನ್ನಿ, ತಾಯಿ ಗಂಗವ್ವನ
ಗುಂಬ ಪೂಜೆನಾ ಮಾಡೊಮೊ ಬನ್ನಿ ॥6॥

ದೀಪಾನ ಹೋಸಿ, ಬೆಳ್ತಕ್ಕಿ ಹಾಕಿ
ಗಂಧದ ಕಡ್ಡಿಲಿ ಆರತಿ ಬೆಳ್ಗಿ
ಕೈ ಮುಗ್ದ್ ಗುಂಬಕೆ, ಗಂಗೆ ಪೂಜೆನಾ
ಮಾಡೊಮೊ ಬನ್ನಿ, ತಾಯಿ ಗಂಗವ್ವನ
ಗುಂಬ ಪೂಜೆನಾ ಮಾಡೊಮೊ ಬನ್ನಿ ॥7॥

* * * * *

## ಹಿಂಗಾರ ತ್ರೈಮಾಸಿಕ ಪತ್ರಿಕೆ ಚಂದಾದಾರನ ತಿಳುವಳ್ಕೆಗೆ

- ಕರ್ನಾಟಕ ಅರಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ ಆಗ್‌ವ 'ಹಿಂಗಾರ' ಪತ್ರಿಕೆನ ನೀವ್ ಎಲ್ಲವು ಸದಸ್ಯರ್ ಆಕು. ಬಿಡಿ ಸಂಚಿಕೆ ಬೆಲೆ ರೂ. 20.00, ತ್ರೈವಾರ್ಷಿಕಕೆ ರೂ. 200.00 ಅದೆ.
- ಸದಸ್ಯರ್ ಆದವುಕೆ ಪತ್ರಿಕೆನ ಅಂಚೆಲಿ ಕಳ್ಸುವೆ.
- ನೀವ್ಗ್‌ಳ ಪರಿಚಯಸ್ತರಿಗೆ ಸದಸ್ಯರ್ ಆಕೆ ತಿಳ್ಸೊಕು.
- ಕತೆಗ / ಪದ್ಯಗ / ಚುಟುಕ /ಲೇಖನಗ ಇತಂವುಕ್ಕೆಲ್ಲಾ ಅವಕಾಸ ಉಟ್ಟು.
- ಬರವಣಿಗೆ ಮಾತ್ರ ನಾಲ್ಕ್ ಪುಟಕೆ ಸೀಮಿತ ಇರೊಕು.
- ಪುಟದ ಒಂದು ಬದಿಲಿ ಮಾತ್ರ ಬರ್ದಿರಕು.
- ಹೆಸರ್ / ವಿಳಾಸ / ದೂರವಾಣಿ ಅಂಕಿಗ ಬರ್ದಿರಕು.

ನಾವ್ಗ್‌ಳ ವಿಳಾಸ :

**ಸಂಪಾದಕರ್**

ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ –571 201,
ಕೊಡಗು ಜಿಲ್ಲೆ
ಈಮೇಲ್ : arebaseacademy@gmail.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 –223055

## ಅಕಾಡೆಮಿಯ ಪ್ರಕಟಣೆಗ

ಸರ್ಮಾಲೆ : ಎಂ.ಜಿ ಕಾವೇರಮ್ಮ
ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ ಕಾವೇರಮ್ಮ
ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
ಕುಂಕುಮ : ಪೂಜಾರೀರ ಜಿ. ಮಾದಪ್ಪ
ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ ಮುಡೂರು
ಬೇಟೆನ ಬಿರ್ಸ – ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
ಬೆಳ್ಳಿಮುಷ್ಠಿ : ಕಟ್ರತನ ಕೆ. ಬೆಳ್ಯಪ್ಪ
ತೋರಣ : ಬಾರ್ಯಂಡ ಆರ್. ಜೋಯಪ್ಪ
ಬೊಲ್ಪು : ಲೋಕೇಶ್ ಕುಂಚಡ್ಕ
ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ

# ಅಕಾಡೆಮಿ ನಡ್ಸಿದ ಕಾರ್ಯಕ್ರಮಗ

ಅಕಾಡೆಮಿ ನಾಟಕ ಕಲಿಕಾ ಶಿಬಿರಲಿ ತಯಾರಿಸಿದ ಅರೆಭಾಷೆ ನಾಟಕ ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವ್ರ ಕಾದಂಬರಿ "ಕರ್ವಾಲೋ" ನಾಟಕ ಪ್ರದರ್ಶನನ ತಾರೀಕ್ 26.01.2017ನೇ ಗುರುವಾರ ಯುವಜನ ಸಂಯುಕ್ತ ಮಂಡಳಿ ರಂಗಮಂಚ, ಸುಳ್ಯ, ಇಲ್ಲಿ ನಡ್ಸಿದ್ದೊ. ಈ ಕಾರ್ಯಕ್ರಮನ ಖ್ಯಾತ ಬರಹಗಾರ್ರ್ ಆದ ಡಾ.ನರೇಂದ್ರ ರೈ ದೇರ್ಲ ಇವು ಉದ್ಘಾಟನೆ ಮಾಡಿ ಮುನ್ನುಡಿ ಮಂಡನೆ ಮಾಡ್ದೊ. ಅಕಾಡೆಮಿ ಅಧ್ಯಕ್ಷರ್ ಶ್ರೀ ಕೊಲ್ಯದ ಗಿರೀಶ್‌ನವು ಅಧ್ಯಕ್ಷತೆ ವಹಿಸಿದ್ದೊ, ರಿಜಿಸ್ಟ್ರಾರ್ ಶ್ರೀ ಉಮರಬ್ಬನವು ಸದಸ್ಯರಾದ ಶ್ರೀ ಬೋಜಪ್ಪಗೌಡ ವೇದಿಕೆಲಿ ಪಾಲ್ಗೊಂಡಿದ್ದೊ.

**ಅಕಾಡೆಮಿ ಪ್ರಾಯೋಜಿತ ಕಾರ್ಯಕ್ರಮಗ :**

ದಿನಾಂಕ 05.04.2017 ರಂದು ಸಮಾಜಕಲ್ಯಾಣ ಇಲಾಖೆ, ಕೊಡಗು ಜಿಲ್ಲೆ ಇವು ನಡ್ಸಿದ ಹಸಿರು ಕ್ರಾಂತಿ ಹರಿಕಾರ ಡಾ||ಬಾಬು ಜಗಜೀವನ್ ರಾಮ್‌ರವರ 110ನೇ ಜನ್ಮ ದಿನಾಚರಣೆ ಕಾರ್ಯಕ್ರಮದ ಮೆರವಣಿಗೆಲಿ ಅಕಾಡೆಮಿನ ಪ್ರಾಯೋಜನೆಲಿ ಸಾಂಪ್ರದಾಯಿಕ ಕಲಾತಂಡ ಭಾಗವಹಿಸಿದ್ದೊ.

## ಲೇಖಕರ ವಿಳಾಸ :

1. **ಎಂ.ಜಿ. ಕಾವೇರಮ್ಮ,** ನಿಸರ್ಗ, ಸುಳ್ಯ, ದ.ಕ –574239, ಮೊ: 9448106685.
2. **ಶ್ರೀಮತಿ ಎಂ.ಟಿ.ಸರೋಜ,** 'ಸ್ಫೂರ್ತಿ'4ನೇಅಡ್ಡ ರಸ್ತೆ,ದಕ್ಷಿಣ ಬೀರಮಂಗಲ, ಸುಳ್ಯ, ದ.ಕ.– 574239.
3. **ಪೂಜಾರಿರ ಜಿ.ಮಾದಪ್ಪ,** ಅರ್ವತ್ತೊಕ್ಲು ಗ್ರಾಮ ಮತ್ತು ಅಂಚೆ, ಮಡಿಕೇರಿ ತಾಲೂಕು, ಕೊಡಗು.
4. **ಮನೋಜ್ ಕುಡೇಕಲ್,** #–1–98/6/21ಎ, ಜೈಹಿಂದ್ ಎನ್‌ಕ್ಲೇವ್, ಮಾಧಪುರ್, ಹೈದರಾಬಾದ್, ತೆಲಂಗಾಣ– 500081.
5. **ಕುಟ್ರತನ ಲಲಿತಾ ಅಯ್ಯಣ್ಣ,** ಅನುಗ್ರಹ, ಗೌಳಿಬೀದಿ ಮಡಿಕೇರಿ, ಮಡಿಕೇರಿ, 571201.
6. **ಕೊಟ್ಟಕೇರಿಯನ ಲೀಲಾ ದಯಾನಂದ,** ಉಪಮಂಡಲಅಧಿಕಾರಿ, ಬಿ.ಎಸ್.ಎನ್.ಎಲ್. ಮಡಿಕೇರಿ.
7. **ಕೊಕ್ಕಲೆ ಮಾಲಿನಿ ಮುತ್ತಪ್ಪ,** ಹೆರವನಾಡು ಗ್ರಾಮ, ಅಪ್ಪಂಗಳ ಅಂಚೆ, ಮಡಿಕೇರಿ,ಕೊಡಗು.
8. **ಡಾ.ಜ್ಞಾನೇಶ್.ಎನ್.ಎ,** ಪ್ರಾಂಶುಪಾಲರು. ಕೆ.ವಿ.ಜಿ ಇಂಜಿನಿಯರಿಂಗ್ ಕಾಲೇಜು, ಸುಳ್ಯ ದ..ಕ –574327.
9. **ಉದಯಕುಮಾರಿ ಚೆಂಬು,** ಮಾಳಿಗಮನೆ, ಬಾಲೆಂಬಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ, ಕೊಡಗು.
10. **ಸೂದನ ಎ.ಎಸ್.ಈರಪ್ಪ** ಪಾಲೂರು, ಮಡಿಕೇರಿ, ಕೊಡಗು.
11. **ಉಮೇಶ್ ಬಿಳಿಮಲೆ ಬಿ.ಆರ್.,** ಕಲ್ಮಕ್ಕಾರು ಅಂಚೆ, ಸುಳ್ಯ .ದಕ– 574218.
12. **ಯೋಗೀಶ್ ಹೊಸಳಿಕೆ,** ಗುತ್ತಿಗಾರು, ಸುಳ್ಯ, ದ.ಕ– 574218.
13. **ಲೋಕೇಶ್ ಕುಂಚಡ್ಕ,** ಕುಂಚಡ್ಕ, ಆಲೆಟ್ಟಿ ಗ್ರಾಮ ಮತ್ತು ಅಂಚೆ, ಸುಳ್ಯ ದ.ಕ.
14. **ಮಿಲನ್ ಎಂ.** ಮಂಡೆಕೋಲು ಮನೆ, ತೊಡಿಕಾನ ಗ್ರಾಮ ಮತ್ತು ಅಂಚೆ, ಸುಳ್ಯ ದ.ಕ.
15. **ಭವಾನಿ ಶಂಕರಹೊದ್ದೆಟ್ಟಿ,** #115,2ನೇ ಮುಖ್ಯ, 1ಎ ಕ್ರಾಸ್, ಬೆಲ್ ಲೇ ಔಟ್, 6ನೇ ಬ್ಲಾಕ್, ವಿದ್ಯಾನಗರ, ಬೆಂಗಳೂರು.
16. **ಕಾಳೆಯಂಡ ತಂಗಮ್ಮ ಅಪ್ಪಚ್ಚು,** ಬಿಳಿಗೇರಿ ಗ್ರಾಮ, ಮಡಿಕೇರಿ,ಕೊಡಗು.
17. **ಕುತ್ಯಾಳ ನಾಗಪ್ಪ ಗೌಡ,** (ಕಿರಣ) ಕಿರಣ ಕುಟೀರ, ಸುಳ್ಯ ದ.ಕ –574239
18. **ಬಾರಿಯಡ ಜೋಯಪ್ಪ,** ಮದೆ, ಮಡಿಕೇರಿ, ಕೊಡಗು.
19. **ಭವಾನಿಶಂಕರ ಅಡ್ತಲೆ,** ಕೆ.ವಿ.ಜಿ ಐ.ಟಿ.ಐ ಸುಳ್ಯ ದ.ಕ. ಕುರುಂಜಿಭಾಗ್– 574327.

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ (2014)

ಸರಕಾರಿ ಅಧಿಸೂಚನೆ ಸಂಖ್ಯೆ: ಕಸಂವಾ 817 ಕಸಧ 2013; ದಿನಾಂಕ 13.08.2014

**ಅಧ್ಯಕ್ಷರು:**

**ಶ್ರೀ ಕೊಲ್ಯದ ಗಿರೀಶ್,** ಮದೆ ಗ್ರಾಮ, ಮದೆ ಅಂಚೆ, ಮಡಿಕೇರಿ ತಾಲೂಕ್ 571 201 ದೂ: 08272-236515 ಮೊಬೈಲ್ : 9448156599.

**ರಿಜಿಸ್ಟ್ರಾರ್:**

**ಶ್ರೀ ಉಮರಬ್ಬ,** ಎಂ.ಎಂ. ಮಂಜಿಲ್, ಈದಾಯತ್ ನಗರ, ಕೋಟೆಕಾರ್, ಮಂಗಳೂರು, ಮೊಬೈಲ್ : 9481149135

**ಅರ್ಥ ಸದಸ್ಯರು:**

**ಶ್ರೀ ಎಲ್.ಎನ್. ಕುಳ್ಳಯ್ಯ,** ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮಡಿಕೇರಿ.

**ಸದಸ್ಯರು :**

**ಡಾ. ಪೂವಪ್ಪ ಕಣಿಯೂರು,** 'ಸ್ಫೂರ್ತಿ', 4ನೇ ಅಡ್ಡರಸ್ತೆ, ದಕ್ಷಿಣ ಬೀರಮಂಗಲ, ಚರ್ಚ್ ರೋಡು, ಸುಳ್ಯ ದ.ಕ. ದೂರವಾಣಿ : 08257-232885/9448984485, pkaniyoor@gmail.com

**ಡಾ. ಕೋರನ ಸರಸ್ವತಿ ಪ್ರಕಾಶ್,** ಸಹ ಪ್ರಾಧ್ಯಾಪಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು, ವಿರಾಜಪೇಟೆ, ಕೊಡಗು ಮೊಬೈಲ್ : 9483826271

**ಶ್ರೀ ಮೋಹನ್ ಸೋನ, ಸೋಣಂಗೇರಿ** ನಡುಮನೆ, ಜಾಲ್ಸೂರು, ಸುಳ್ಯ ತಾಲೂಕು ದ.ಕ.- 574239 ಮೊಬೈಲ್ : 9448791799

**ಶ್ರೀಮತಿ ಸಂಗೀತಾ ರವಿರಾಜ್,** ಹೊಸೂರು ಮನೆ, ಬಾಲೆಂಬಿ ಅಂಚೆ, ಚೆಂಬು, ಮಡಿಕೇರಿ- 574234 ಮೊಬೈಲ್ 7259135346

**ಶ್ರೀ ಯಶವಂತ ಕುಡೆಕಲ್,** ಕುಂಬೆತ್ತಿ ಬನ, ದುಗ್ಗಲಡ್ಕ, ಸುಳ್ಯ ದ.ಕ. -574239 ಮೊಬೈಲ್ : 9481180519

**ಶ್ರೀ ವಸಂತ ಬಿ.ಸಿ.,** ಬಾಕಿಲ ಮನೆ, ಕಲ್ಮಕಾರು ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9449999354

**ಶ್ರೀ ಬೋಜಪ್ಪ ಗೌಡ ಎಂ.** ಮದುವೆ ಗದ್ದೆ, ಉಬರಡ್ಕ ಮಿತ್ತೂರು, ಸುಳ್ಯ ತಾಲೂಕು ದ.ಕ.- 574248 ಮೊಬೈಲ್ : 7760782925

**ಶ್ರೀ ಸದಾನಂದ ಗೌಡ, ಮಾವಜಿ,** ಮಂಡೆಕೋಲು, ಸುಳ್ಯ ತಾಲೂಕು ದ.ಕ.-574239 ಮೊಬೈಲ್ : 9448164638

**ಶ್ರೀ ಮೋಹನ್‌ದಾಸ್ ಮಂದ್ರೀರ,** ಹೊಸ್ಕೇರಿ ಗ್ರಾಮ, ಮರಗೋಡು, ಮಡಿಕೇರಿ, ಮೊಬೈಲ್ : 9448720112

**ಸಹಸದಸ್ಯರು:**

**ಶ್ರೀ ಕುಡೆಕಲ್ ಸಂತೋಷ್,** ಹೆಮ್ಮತ್ತಾಳು ಗ್ರಾಮ, ಮುಕ್ಕಂದೂರು, ಮಡಿಕೇರಿ ತಾಲೂಕು, ಕೊಡಗು ಮೊಬೈಲ್ : 9972538584, 8762110948

**ಶ್ರೀ ಕಾರ್ಯಪ್ಪ ಪಿ.ಎಸ್.,** ಪುಂಡಿಗದ್ದೆ, ಯೇನೇಕಲ್ ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9731197656

**ಶ್ರೀ ಅಣ್ಣಾಜಿ ಗೌಡ, ಪೈಲೂರು ಮನೆ,** ಅಮರಮುಡ್ನೂರು ಗ್ರಾಮ, ಸುಳ್ಯ ತಾಲೂಕು ದ.ಕ. - 574212 ಮೊಬೈಲ್ : 94488058748/9164401745

7-12-2016, ಪ್ರಾಧಿಕಾರ ಮತ್ತು ಅಕಾಡೆಮಿಗಳ
ಸಂಯುಕ್ತಾಶ್ರಯದಲ್ಲಿ ಸಂಗಮ-ಸಂಭ್ರಮ 2016, ಮಡಿಕೇರಿ










ಯಕ್ಷಗಾನ ಮತ್ತು ಸಾಂಸ್ಕೃತಿಕ ಕಾರ್ಯಕ್ರಮ
11–12–2016 – ಗೌಜಿ – 2016, ಸುಳ್ಯ

# 'ಹೆಣ್ಣ್ ಇಳ್ಸಿ ಕೊಡುವ ಹಾಡ್'

-ಎಂ.ಜಿ. ಕಾವೇರಮ್ಮ

ಹತ್ತ್ ಕುಟುಂಬದಾ
ಹದ್ನೆಂಟ್ ಗೋತ್ರದಾ
ಜಾತಿ ಬಾಂದವರೆದ್‌ರ್
ಹೆಣ್ಣಿಳ್ಸಿ ಕೊಟ್ಟಾವೆ ॥1॥

ನಮ್ಮ ಜಾಲ್‌ಲಿ ಬೆಳ್ದ
ಗುಡ್ಡು ಮೊಲ್ಲಿಗೆ ಹೂನ
ನಿಮ್ಮ ಮುಡಿಗಿಸಿಕೆಂತ
ತಂದೊಳಿಂದ್ ॥2॥

ತಕಣಿ ನೀ ಈ ಕೂಸ್ನ
ನಮ್ಮ ಮನೆ ಬೊಳ್ಪುನ
ನಿಮ್ಮ ಮನೆ ತುಂಬಿಸಿಕೆ
ಒಪ್ಪಿಸಿ ಕಣಿನಿ ॥3॥

ಮೋಸ, ವಂಚನೆ ಇದಕೆ
ಯಾಗೋಳು ಗೊತ್ತಿಲ್ಲೆ
ಕಪಟ-ಕೊಂಕ್‌ನ ಮಾತ್
ಮಾತಾಡಿಕಿಲ್ಲೆ ॥4॥

ಕಷ್ಟನೇ ಗೊತ್ತಿಲ್ಲೆ
ಕೊಂಡಾಟಲೀ ಬೆಳ್ದ
ಈ ಕೂಸ್ನ ನೀವ್‌ಗಿಂದ್
ನಾವು ಒಪ್ಪುಸುವೆ ॥5॥

ಸೊಂಪುಲೀ ಬೆಳ್ದ
ಗುಡ್ಡು ಮೊಲ್ಲಿಗೆ ಹೂವು
ಕಷ್ಟ, ನಷ್ಟಕೆ ಇದ್
ಬಾಡಿ ಹೋವಾ ಹೂವು ॥6॥

ಸುಖ, ದುಃಖಲೀ ಕೂಸು
ಎಲ್ಲ ಕಾಲಲಿ ನೀವ್ಗೆ
ಒಳ್ಳೆ ಹೆಸ್‌ರ್‌ನ ತಂದ್
ಮೊರ‍್ಯಾದೆ ಉಳ್ಸಿದೆ ॥7॥

ಹೊತ್ತ್ ಹೊತ್ತಿಗೆ ನಿಮ್ಮ
ಕೆಲ್ಸ ಕಾರ‍್ಯಲಿ ಎಲ್ಲ
ಒಂದಾಗಿ ಬೊದುಕಿ
ನೀವ್ಗೆ ಕೀರ್ತಿನಾ ತಂದದೆ ॥8॥

ನಿನ್ನ ಹೆಣ್ಣ್‌ನ ಕೈ ಹಿಡ್ದ್
ಸುಖವಾಗಿ ಇರ್ ಮಗನೆ
ನಿಮ್ಮ ಸೊಸೆ - ತಂಗೆಂತ
ತಿಳ್ದ್ ಕಣಿನಿ ॥9॥

ಸಂಸಾರ ಸಾಗರಲಿ
ಮೀಂದ್ ಮೇಲಕೆ ಬಾವ
ತಾಳ್ಮೆನಾ ಹೆಣ್ಣ್ ಇದ್
ಒಪ್ಪಿಸಿ ಕಣಿನಿ ॥10॥

ಇಂದ್‌ಂದ ಈ ಕೂಸು
ಯಾಗೋಳು ನಿಮ್ಮದೇ
ಪ್ರೀತಿ ತೋರಿಸಿ ಗೆಲ್ಲಿ
ಅವಳ ನೀವೆಲ್ಲಾ ॥11॥

ತೌರ್‌ಂದ ನೀ ಇಂದ್
ದೂರ ಹೋದೇ ಮಗಳೆ
ನಿನ್ನ ಮನೆ ಯಾಗೋಳು
ಗಂಡನಾ ಮನೆನೆ ॥12॥

ಗಂಡನೇ ದೇವುರು
ಬೇರೆ ದೇವುರು ಇಲ್ಲೆ
ಗಂಡನೆ ಇನ್ಮುಂದೆ
ನಿನ್ನ ಜೀವಾ ॥13॥

ಅತ್ತಿಗೆಕ ನಾದಿನಿಕ
ಅಕ್ಕ, ತಂಗೆಕ ನಿಂಗೆ
ಬಾವ- ಮೈದ್ನರ್ ಎಲ್ಲ
ಅಣ್ಣ- ತಮ್ಮಂದರ್ ॥14॥

ಕೈ ಹಿಡ್ದ ಗಂಡನಾ
ಚಾಕ್ರಿನಾ ಮಾಡಿಕೆ
ದಾಸಿನಾ ಹಾಂಗಿರ್
ಪ್ರೀತಿಂದ್ ಗೆಲ್ಲ್ ॥15॥

ಅಂವನ ಕಾರ್ಬಾರಕ್ಕೆ
ಮೊಂತ್ರಿಯಾಗಿರ್ ನೀ
ತಿಂಬ ಉಂಬೋದರ್ಲಿ ನೀ
ಅವ್ವನಾ ಹಾಂಗಿರ್ ॥16॥

ಆ ಮನೆನ ಜನಂಗೆಲ್ಲ
ನಿನ್ನೋವು ಮುಂದೆ
ನಿನ್ನ ಸುಖ ಬಾಗ್ಯನಾ
ಬೆಳ್ಗೋವು ಅವುನೇ ॥17॥

ಇದರ ತಿಳ್ದ್ ನೀ ಬಾಳ್
ಗಂಡನಾ ಮನೆಲಿ
ಗಂಡಂಗೆ ತಕ್ಕ
ಹೆಣ್ಣಾಗಿ ಬಾಳ್ ॥18॥

ಮುದ್ದು ಮಗಳೇ ನೀ
ಕಣ್ಣನೀರ್ ಹಾಕ್ಬಡ
ನಿನ್ನ ಕಣ್ಣ ನೀರ್
ತೌರ್‌ಗೇ ಕೇಡ್॥19॥

ನಮ್ಮ ಸಕ್ತಿಗೆ ತಕ್ಕ
ಬೊಳುವಳಿನ ಕೊಟ್ಟೋಲೊ
ಹೋಗಿ ಬಾ ಮಗಳೇ
ಕಣ್ಣ ನೀರ್‍ನ ಒರ್‍ಸಿ ॥20॥

ತಕಣಿನೀ ಈ ಕೂಸ್ನ
ನಿಮ್ಮ ಕೈ ಗೊಪ್ಪುಸುವೆ
ನಿಮ್ಮ ಮನೆ ಬೆಳ್ಗಿಸುವ
ಈ ಭಾಗ್ಯ ಲಕ್ಷ್ಮೀನಾ ॥21॥

ಜಯ ಜಯ ಕುಲದೇವ್ರು ತಿಮ್ಮಪ್ಪಂಗೆ
ಜಯ ಜಯ ಶೃಂಗೇರಿ ಗುರು ಪೀಠಕೆ
ಜಯ ಜಯ ಸುಳ್ಯದ ಚೆನ್ನಕೇಶವಂಗೆ
ಜಯ ಜಯ ಗೌಡರ ಜಾತಿ ಮಕ್ಕಳಿಗೆ

# ಆರತಿ ಹಾಡ್'

-ಎಂ.ಜಿ. ಕಾವೇರಮ್ಮ

ದಶರಥ ಕಂದಂಗೆ ರಘುಕುಲ ತಿಲಕಂಗೆ
ಶಿಶುಪಾಲ ವೈರಿಗೆ ಕೃಷ್ಣ ಮುಕುಂದಂಗೆ
ಶಶಿಮೋರೆ ಹೆಣ್ಮಕ್ಕ ಮಂಗಳಾರತಿ ತಂದ್
ಕುಸಿ ಕುಸಿಲಿ ಸೋಬಾನೆ ಹಾಡಿಕಂಡ್
ಚಿನ್ನದಾರತಿನಾ ಬೆಳಾಗಿದೊ ಸೋಬಾನೆ ॥1॥

ಮುತ್ತಿನ ಓಲೆ ಸರಮಾಲೆ ಪದಕಗ
ಮುತ್ತಿನ ಬೊಟ್ಟು, ಮೂಂಕುತಿ ಇಸಿದ
ಮುತ್ತಿನ ಕಡಗ, ಮುಂಗೈನ ಸರ್ಪೋಳಿ
ಕೈ ತುಂಬ ಬಳೆಗೆಳ ಸಿಂಗಾರ ಮಾಡಿದ
ಸೀತಾದೇವಿಗೆ ಮುತ್ತೈದೆಗೆಲ್ಲಾ
ಮುತ್ತಿನಾರತಿನಾ ಬೆಳಾಗಿದೊ ಸೋಬಾನೆ ॥2॥

ಮಾಣಿಕ್ಯ ಮಣಿಗಳ ರತ್ನ ಪೀಠಲಿ ಕುದ್ದ
ರಾಜಾಧಿರಾಜಾ ಶ್ರೀರಾಮ ದೇವ್ರುಗೆ
ಕಲ್ಲಾದ ಅಹಲ್ಯೆನ ಉದ್ಧಾರ ಮಾಡಿದ
ಶಬರಿಗೆ ಮೋಕ್ಷನ ಕೊಟ್ಟ ಶ್ರೀರಾಮಂಗೆ
ಮುತ್ತೈದೆ ಹೆಣ್ಮಕ್ಕಾ ಒಟ್ಟಿಗೆ ಕೂಡಿಕಂಡ್
ರತ್ನದಾರತಿನಾ ಬೆಳಾಗಿದೊ ಸೋಬಾನೆ ॥3॥

ಚಿನ್ನದ ಡಾಬೂ, ನೆತ್ತಿ ಬೊಗ್ತಲೆ ಇಸಿದ
ತೋಳಿಗೆ ತೋಳ್ಬಂದಿ, ಕಾಲಿಗೆ ಪೈಜಣಿಕೆ
ಕಾಶಿಪಿತಾಂಬರ ಉಟ್ಟ ಶ್ರೀ ಲಕ್ಷ್ಮೀಗೆ
ಮುತ್ತೈದೆ ಹೆಣ್ಮಕ್ಕಾ ಒಟ್ಟಿಗೆ ಸೇರಿಕಂಡ್
ಅಕ್ಕಿಯಾರತಿನಾ ಬೆಳಾಗಿದೊ ಸೋಬಾನೆ ॥4॥

ಹತ್ತವತಾರನ ಎತ್ತಿದ ಶ್ರೀವಿಷ್ಣು ದೇವಂಗೆ
ಪುತ್ತೋಳಿ ಬೊಂಬೆ ಹಾಂಗಿರುವ ಶ್ರೀಲಕ್ಷ್ಮಿಗೆ
ಮುತ್ತೈದೆ ಹೆಣ್ಮಕ್ಕಾ ಒಟ್ಟಿಗೆ ಸೇರಿಕಂಡ್
ಮಂಗಳಾರತಿನಾ ಬೆಳಾಗಿದೊ ಸೋಬಾನೆ ॥5॥

* * * * *

# ಬಣ್ಣ ಬಂಗಾರ ಇಸಿಕನ ಹಾಡುವ ಸೋಬಾನೆ'

-ಎಂ.ಜಿ. ಕಾವೇರಮ್ಮ

ಜನಕ ರಾಜನ ಮಗಳ್ ಜಾನಕಿ ದೇವಿಗೆ
ಚಿನ್ನದ ಹರಿವಾಣಲಿ ಬಣ್ಣ ಬಂಗಾರ ತಂದ್
ಮುತ್ತೈದೆ ಹೆಣ್ಮಕ್ಕ ಸಿಂಗಾರ ಮಾಡಿಕೆ
ಸುರು ಮಾಡಿದೊ ಸೋಬಾನೆ ॥1॥

ಗಮಲ್‌ನ ಎಂಣೆನ ತಲೆತುಂಬ ಪೂಜಿ
ಬೆಳ್ಳಿ ಬಾಚಣಿಗೆಲಿ ಕೂದೊಲು ಬಾಚಿ
ನೆತ್ತಿನ ನೊಡುಲಿ ಬೊಗ್ತಲೆ ತೆಗ್ದ್
ಉದ್ದನೆ ಜಡೆ ಹಾಕಿ, ಜಡೆ ಗೊಂಡೆ ರಾಕುಟಿ
ಚಿನ್ನದ ತಲೆ ಹೂವು ಜಡೆ ತುಂಬ ಇಸಿದ್
ಮುತ್ತೈದೆ ಹೆಣ್ಮಕ್ಕ ಸಿಂಗಾರ ಮಾಡಿವೆ ಸೋಬಾನೆ ॥2॥

ಹುಣ್ಣಿಮೆ ಚಂದ್ರನಾ ಮೋರೆನ ಸೀತೆಗೆ
ಕಣ್ಣ್‌ಗೆ ಕಣ್ಣ್‌ಕೊಪ್ಪು, ಹಣೆಗೆ ಕುಂಕುಮ ಬೊಟ್ಟು
ಕೆನ್ನೆಗೆ ಅರ್ಸಿಣ, ಮೇಲೆ ದೃಷ್ಟಿ ಬೊಟ್ಟು
ಚುಕ್ಕಿನ ಇಟ್ಟ್, ಮುತ್ತೈದೆ ಹೆಣ್ಮಕ್ಕಾ
ಸಿಂಗಾರ ಮಾಡಿವೆ ಸೋಬಾನೆ ॥3॥

ಪಟ್ಟೆ ಕುಪ್ಪಸ ತೊಡ್ಸಿ, ದಾರೆ ಸೀರೆನ ಉಡ್ಸಿ
ಸೊಂಟಕೆ ಚಿನ್ನದ ಡಾಬುನ ಕಟ್ಟಿ
ಕುತ್ತಿಗೆ ತುಂಬಾ ಮುತ್ತು ರತ್ನದ ಹಾರ
ಚಿನ್ನದ ಪದಕಗ ಹೊಳೆವ ಮಾಣಿಕ್ಯ, ಮಾಲೆ ಸರಗ
ತೋಳಿಗೆ ತೋಳ್ಬಂದಿ, ನೆತ್ತಿ ಬೊಗ್ತಲೆ ಬೊಟ್ಟು
ಮುತ್ತೈದೆ ಹೆಣ್ಮಕ್ಕಾ, ಸಿಂಗಾರ ಮಾಡಿವೆ ಸೋಬಾನೆ ॥4॥

ಮೂಂಕಿಗೆ ಮೂಂಕುತಿ, ಕಾಲ್ಬೆರಳಿಗೆ ಕಾಲುಂಗ್ರ
ವಜ್ರದ ಕೆಬಿಯೋಲೆ, ಕೆನ್ನೆ ಸರ್ಪೋಳಿ ಕೋಸಿ
ಚಿನ್ನದ ಕಡಗಾ, ಕೈ ತುಂಬ ಬಳೆಗಾ
ಬೆರಳ್‌ಗೆ ಮುದ್ರೆನ ಉಂಗುರ ತೊಡ್ಸಿ
ಮುತ್ತೈದೆ ಹೆಣ್ಮಕ್ಕಾ, ಸಿಂಗಾರ ಮಾಡಿವೆ ॥5॥

ಮುಡಿಗೆ ಮಲ್ಲಿಗೆ ಮಾಲೆ, ಸುರಗಿ, ಸಂಪಿಗೆ ಹೂವು
ಅದರ ಮೇಲೊಂದು ಕೇದಗೆ ಹೂವು
ಅದರ ಮೇಲೊಂದು ಕೇದಗೆ ಹೂನ ಇಸಿದ್
ಪಿಂಗಾರದೆಸಳ್‌ನ ತಲೆತುಂಬಾ ಮುಡ್ಸಿ
ಬಂಗಾರದಂಚಿನ ಮುಸ್ಕುನ ಅರ್ದ್ವೆ ಹಾಕಿ
ಮುತ್ತೈದೆ ಹೆಣ್ಮಕ್ಕಾ ಸೀತಾದೇವಿನ
ಸಿಂಗಾರಾ ಮಾಡಿವೆ ಸೋಬಾನೆ ॥9॥

ಚೆಂದೊಳ್ಳೆ ಚೆಲುವೆ ಜನಕರಾಜನ ಮಗಳ
ದಾರೆ ಮಂಟಪಕೆ ಕರ್ಕಂಡ್ ಹೋಕೆ
ಮುತ್ತೈದೆ ಹೆಣ್ಮಕ್ಕಾ ಸಿಂಗಾರ ಮಾಡಿದೊ ॥7॥

HINGARA Arebhashe Quarterly Volume -1, Issue -4
Date: 10.05.2017 Kodagu KARARB/2016/69571 Price : 20/- Pages : 84




ಕರ್ವಾಲೋ - ಮುನ್ನುಡಿ ಮಂಡನೆ ಡಾ॥ ಸುರೇಂದ್ರ ರೈ ದೇರ್ಲ




ಕರ್ವಾಲೋ ನಾಟಕ ಪ್ರದರ್ಶನಕ್ಕೆ ಮದುವೆಗದ್ದೆ ಬೋಜಪ್ಪ ಗೌಡರಿಂದ ಶುಭ ನುಡಿ

Printed by UMARABBA on behalf of Registar, Karnataka Arebhase Samskruthi Mathu Sahitya Academy, and, Published by UMARABBA on behaf of registar of registar Karnataka Arebhashe Samskruthi Mathu Sahitya Acadamy on behalf of KARNATAKA AREBHASE SAMSKRUTHI MATHU SAHITHYA ACADEMI (name of woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhashe Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : UMARABBA

ಪೊನ್ನಿ-ಮಾಯಿ-ಸುಗ್ಗಿ ತಿಂಗ

ಅರೆಭಾಷೆ ತ್ರೈಮಾಸಿಕ

ಹಿಂಗಾರ

# ಹಿಂಗಾರ

ಕರ್ನಾಟಕ ಸರ್ಕಾರ

ಅರೆಭಾಷೆ ತ್ರೈಮಾಸಿಕ

ಸಂಪುಟ–1 ಸಂಚಿಕೆ–4 ದಿನಾಂಕ : 10.05.2017 ಕೊಡಗು ರೂ. 20/–

## ಪೊನ್ನಿ- ಮಾಯಿ–ಸುಗ್ಗಿ ತಿಂಗ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ